ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೩೧

# ಇಂಗ್ಲಿಷ್ ಪ್ರಬಂಧಗಳು

ಎಸ್. ಮಂಜುನಾಥ್, ಎಂ.ಎ.



ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೬೧

ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರಪುಸ್ತಕಮಾಲೆ—೩೧

# ಇಂಗ್ಲಿಷ್ ಪ್ರಬಂಧಗಳು

7-10-68

ಎಸ್. ಮಂಜುನಾಥ್, ಎಂ.ಎ.






ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೬೧

ಮೊದಲನೆಯ ಮುದ್ರಣ : ೧೯೪೧

ಎರಡನೆಯ ಮುದ್ರಣ : ೧೯೪೯

ಮೂರನೆಯ ಮುದ್ರಣ : ೧೯೬೧

೩,೦೦೦ ಪ್ರತಿಗಳು



ಬೆಲೆ :

ಸಾದಾ ಪ್ರತಿ ೨೫ ನಯೆ ಪೈಸೆ

ಉತ್ತಮ ಪ್ರತಿ ೩೭ ನಯೆ ಪೈಸೆ

ಮುದ್ರಕರು

ಜಿ. ಎಚ್. ರಾಮರಾವ್

ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್

ಮೈಸೂರು

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚು ವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದ ವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವು ಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರ ದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹ ನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿ ಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿವಸವೇ ಸುಮಾರು ೬೦೦ ಪ್ರತಿಗಳು ಮಾರಾಟ ವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕಮಾಲೆ ಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸೆಲರ್ ಪದವಿಯಿಂದ ಈಗತಾನೆ ವಿಶ್ರಾಂತಿ

ಪಡೆದಿರುವ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು; ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವುದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದುಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು ಮುಗಿಸುವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಗೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗಬಲ್ಲುದು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು,
೨೪-೪-೧೯೪೨

**ಇ. ಜಿ. ಮೆಕಾಲ್ಪೈನ್**
ವೈಸ್-ಛಾನ್ಸೆಲರ್

# ಪೀಠಿಕೆ

೧೯೪೦ನೇ ನೊವೆಂಬರ್ ತಿಂಗಳಲ್ಲಿ ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಬೆಂಗಳೂರು ಶಾಖೆಯವರು ಚಿಕ್ಕಬಳ್ಳಾಪುರದಲ್ಲಿ ವಿಶೇಷ ಉಪನ್ಯಾಸಮಾಲೆಯನ್ನು ಏರ್ಪಡಿಸಿದ್ದರು. ಆಗ ನಾಲ್ಕು ಬಾರಿ ಮಾಡಿದ ಉಪನ್ಯಾಸಗಳ ವಸ್ತುವೆ ಈ ಪುಸ್ತಕಕ್ಕೆ ಆಧಾರ. ಮೂರು ಶತಮಾನಗಳ ಹಿಂದೆ ಹುಟ್ಟಿ ದಿನೇ ದಿನೇ ವಿಕಾಸವಾಗಿ ವಿಶ್ವದಷ್ಟು ವಿಶಾಲವೂ ವಿವಿಧವೂ ಸುಂದರವೂ ಆಗಿ ಬೆಳೆದು ಪಂಡಿತ ಪಾಮರರೆಲ್ಲರ ಮೆಚ್ಚುಗೆಯನ್ನು ಪಡೆದಿರುವ ಈ ಸಾಹಿತ್ಯರೂಪದ ಚರಿತ್ರೆಯನ್ನು ಹೇಳುವುದಾಗಲಿ, ಶ್ರೇಷ್ಠ ಪ್ರಬಂಧಕಾರರೆಲ್ಲರ ಪರಿಚಯ ಮಾಡಿಕೊಡುವುದಾಗಲಿ, ಶ್ರೇಷ್ಠ ಪ್ರಬಂಧಗಳೆಲ್ಲದರ ಹೆಸರು ಹೇಳುವುದಾಗಲಿ ಈ ಸಣ್ಣ ಪುಸ್ತಕದಲ್ಲಿ ಸಾಧ್ಯವಿಲ್ಲ. ಮುಖ್ಯರಾದ ಕೆಲವರನ್ನು ಮಾತ್ರ ಆರಿಸಿ ಸ್ಥೂಲಪರಿಚಯ ಮಾಡಿಕೊಟ್ಟು ಅವರ ಪ್ರಬಂಧಗಳ ಕೆಲವು ಭಾಗಗಳನ್ನು ಮಾತ್ರ ಉದಾಹರಣೆಗಾಗಿ ಕೊಟ್ಟಿದೆ. ಲಲಿತ ಪ್ರಬಂಧದ ರೂಪುಲಕ್ಷಣಗಳನ್ನು ತೋರಿಸಿ ಅದರಲ್ಲಿ ಅಭಿರುಚಿ ಹುಟ್ಟಿಸುವುದು ಈ ಪುಸ್ತಕದ ಉದ್ದೇಶ.

ಅದನ್ನು ಬರೆಯಲು ಸಲಹೆಗಳನ್ನು ಕೊಟ್ಟು, ಬರೆದ ಮೇಲೆ ಅದನ್ನು ತಿದ್ದಿ ಸಹಾಯ ಮಾಡಿದ ನನ್ನ ಗುರುಗಳಾದ ಶ್ರೀಮಾನ್ ಎಸ್. ವಿ. ರಂಗಣ್ಣನವರಿಗೂ ನನ್ನ ಸ್ನೇಹಿತರಾದ ಶ್ರೀಮಾನ್ ವಿ. ಸೀತಾರಾಮಯ್ಯನವರಿಗೂ ಭಾಷಾಂತರ

ಗಳನ್ನು ಮಾಡಿ ಓದಿದಹಾಗೆಲ್ಲಾ ಬೇಸರವಿಲ್ಲದೆ ಕೇಳಿ ಅವನ್ನು ಉತ್ತಮಗೊಳಿಸಲು ಸಲಹೆಗಳನ್ನು ಕೊಟ್ಟ ನನ್ನ ಸ್ನೇಹಿತರಾದ ಶ್ರೀಮಾನ್ ಎಂ. ಎ. ಕೃಷ್ಣಸ್ವಾಮಿಯವರಿಗೂ ನನ್ನ ಅನೇಕ ವಂದನೆಗಳು.

ಎಸ್. ಮಂಜುನಾಥ್.

# ವಿಷಯಾನುಕ್ರಮಣಿಕೆ

# ಇಂಗ್ಲಿಷ್ ಪ್ರಬಂಧಗಳು

## ೧. ಪ್ರವೇಶ

ಇಂಗ್ಲಿಷಿನಲ್ಲಿ 'ಎಸ್ಸೆ' (Eassy) ಎನ್ನುವ ಮಾತನ್ನು ಕನ್ನಡದಲ್ಲಿ ಪ್ರಬಂಧವೆಂದು ಹೇಳುವುದು ರೂಢಿಗೆ ಬಂದಿದೆ. ಪ್ರಬಂಧ ಮುಖ್ಯವಾಗಿ ಗದ್ಯಸಾಹಿತ್ಯದ ಒಂದು ರೂಪ; ಇದು ಸುಮಾರು ಉದ್ದದ ಗದ್ಯಬರವಣಿಗೆ. ಬರಹಗಾರನು ಒಂದು ವಿಷಯವನ್ನು ಕುರಿತು ತನ್ನದೇ ಆದ ವ್ಯಕ್ತಿವೈಶಿಷ್ಟ್ಯದಿಂದ ಸುಲಭ ಶೈಲಿಯಲ್ಲಿ ಬರೆಯುವನು. ಆ ವಿಷಯದ ಸಂಬಂಧವಾಗಿ ಅವನಿಗುಂಟಾಗಿರುವ ಅನುಭವ ಮತ್ತು ಆಳವಾದ ಯೋಚನೆಗಳನ್ನು ಸಂಕ್ಷೇಪವಾಗಿ, ಲಘುವಾಗಿ ಹೇಳುವನು. ಈ ಬಗೆಯ ಬರವಣಿಗೆ ಪುರಾತನವಾದುದು. ಪ್ರಾಚೀನ ಗ್ರಂಥಗಳಲ್ಲಿ ಆದರ ಮಾದರಿಗಳು ಅನೇಕ ಅಡಗಿರಬೇಕು. ಆದರೆ ಸ್ವತಂತ್ರವಾದ ಸಾಹಿತ್ಯ ವಿಭೇದವಾಗಿ ಅದನ್ನು ಬರೆಯಲು ಆರಂಭಿಸಿದುದು ಇತ್ತೀಚೆಗೆ. ಪ್ರಪಂಚ ಎಷ್ಟು ವಿವಿಧವೋ ಮಾನವನ ಅನುಭವವೂ ಅಷ್ಟು ವಿಚಿತ್ರ. ಆದುದರಿಂದ ಪ್ರಬಂಧದ ರಾಜ್ಯಕ್ಕೆ ಒಳಗಾಗದ ಅಥವಾ ಹೊರಗಿರುವ ವಿಷಯವೇ ಇರಲಾರದು. ಹಲ್ಲು ಕುಯ್ಯುವುದರಿಂದ ಆರಂಭ ಮಾಡಿ, ಸಾಮಾನ್ಯಜೀವನದ ಎಲ್ಲ ಕೆಲಸಕಾರ್ಯಗಳನ್ನೂ ಒಳಕೊಂಡು, ಪರಮಾತ್ಮನ ಸ್ವರೂಪ, ಸೃಷ್ಟಿಯ ರಹಸ್ಯಗಳು ಮೊದಲಾದ ಗಹನ ವಿಚಾರಗಳವರೆಗೂ ಪ್ರಬಂಧದ ವ್ಯಾಪ್ತಿ ಇದೆ. ಅಂದರೆ ಪ್ರಬಂಧಕ್ಕೆ ವಿಶ್ವದಲ್ಲೆಲ್ಲ ಸಾಮಗ್ರಿ ದೊರಕಿದಂತಾಯ್ತು.

ಆದಕ್ಕೆ ಅಗತ್ಯವಾದ ಅಂಶ ಇನ್ನೊಂದಿದೆ: ವಿಧ ವಿಧವಾದ ಅನುಭವಗಳನ್ನು ಸವಿಯಲೂ ಮತ್ತು ಪ್ರಕಾಶಪಡಿಸಲೂ ಹದವಾಗಿರುವ ಮನಸ್ಸು. ಇದೇ ಮುಖ್ಯ. ಈ ಮನಸ್ಸಿನ ಜನ ಹೆಚ್ಚಿದಷ್ಟೂ ಪ್ರಬಂಧಗಳು ಹೆಚ್ಚುವುವು.

ಪ್ರಬಂಧದಲ್ಲಿ ಎರಡು ಜಾತಿ; ಒಂದು ಗಹನವಾದ ವಿಚಾರಗಳನ್ನು ಕುರಿತು ಗಂಭೀರವಾದ ಶೈಲಿಯಲ್ಲಿ ಎರಡರಿಂದ ನೂರ ಐವತ್ತು ಪುಟಗಳವರೆಗೂ ಬರೆಯಬಹುದಾದದ್ದು. ವಿಷಯೋಪಪಾದನೆ ಮಾಡುವುದು, ಶಾಸ್ತ್ರವಿಚಾರ ಮತ್ತು ಸತ್ಯಾಂಶಗಳನ್ನು ಖಚಿತವಾಗಿ ಓದುಗನಿಗೆ ತಿಳಿಯಪಡಿಸುವುದು ಇದರ ಮುಖ್ಯ ಉದ್ದೇಶ. ಲೇಖಕನ ಅನುಭವ ವ್ಯಕ್ತಿವತ್ತಾಗಿ ಹೊರಬೀಳುವುದಿಲ್ಲ. ಶೈಲಿ ಕಠಿನವೂ ಬಿಗಿಯೂ ಆಗಿರುವುದೇ ಹೊರತು ಸರಳವಾಗಿಯೂ ಮನೋಹರವಾಗಿಯೂ ಇರುವುದಿಲ್ಲ. ಈ ಪ್ರಂಬಧದ ವಿಷಯು ಗಹನವಾದ ಯಾವ ವಿಚಾರವಾದರೂ ಆಗಬಹುದು. ಇಂಗ್ಲಿಷ್ ಸಾಹಿತ್ಯದಲ್ಲಿ ಹುಟ್ಟಿದ ಮೊದಲನೆಯ ಪ್ರಬಂಧಗಳು ಈ ಜಾತಿಯವು. ಅದನ್ನು ಪ್ರಾರಂಭಿಸಿದವನು ಫ್ರಾನ್ಸಿಸ್ ಬೇಕನ್. ಅವನಾದಮೇಲೆ ಆ ರೀತಿಯಲ್ಲಿ ಪ್ರಬಂಧ ಬರೆದವರು ಲಾಕ್, ಡ್ರೈಡನ್, ಹ್ಯೂಮ್, ಮೆಕಾಲೇ, ಕಾರ್ಲೈಲ್, ರಸ್ಕಿನ್, ಹರ್ಬರ್ಟ್ ಸ್ಪೆನ್ಸರ್ ಮುಂತಾದವರು

ಎರಡನೆಯ ಜಾತಿಯವೇ ಲಲಿತ ಪ್ರಬಂಧಗಳು. ಇವುಗಳ ಶೈಲಿ ಸುಲಭವೂ ಮನೋಹರವೂ ಆಗಿರುವ ಸಂಭಾಷಣೆಯ ಶೈಲಿ, ಇವುಗಳಲ್ಲಿ ವಿಷಯಕ್ಕಿಂತಲೂ ಅದನ್ನು ಹೇಳುವ ರೀತಿ ಮುಖ್ಯ. ಓದುಗನ ಮನಸ್ಸಿಗೆ ಜ್ಞಾನವನ್ನು ತುಂಬುವ ಆಸೆ ಪ್ರಬಂಧ ಬರೆಯುವವನಿಗಿಲ್ಲ. ಅದನ್ನು ಓದುವಾಗ ಹರ್ಷವುಂಟಾಗಬೇಕೆನ್ನುವುದು ಅವನ ಮುಖ್ಯಾಕಾಂಕ್ಷೆ. ಈ ಮಧ್ಯೆ

ಜ್ಞಾನಬೋಧೆಯಾದರೂ ಸರಿ, ನೀತಿಬೋಧೆಯಾದರೂ ಸರಿ. ಲಲಿತಪ್ರಬಂಧದಲ್ಲಿ ನಾವು ಮುಖ್ಯವಾಗಿ ನೋಡುವುದು ಮನಸ್ಸಿನ ವಿಲಾಸವನ್ನು. ಮನಸ್ಸಿನ ವಿಲಾಸಕ್ಕೆ ಕಟ್ಟೇನು? ಈ ಗುಂಪಿಗೆ ಸೇರತಕ್ಕವರು ಮಾಂಟೇನ್, ಕೌಲಿ, ಅಡಿಸನ್, ಗೋಲ್ಡ್‌ಸ್ಮಿತ್, ಲ್ಯಾಂಬ್, ಸ್ಟೀವನ್‌ಸನ್, ಚೆಸ್ಟರ್‌ಟನ್, ಬೆಲಕ್, ಲಿಂಡ್, ಗಾರ್ಡಿನರ್, ಲ್ಯೂಕಾಸ್. ಈ ಪುಸ್ತಕದಲ್ಲಿ ನಾವು ವಿಚಾರಮಾಡುವುದು ಇವರ ಪ್ರಬಂಧಗಳನ್ನು ಕುರಿತೇ.

ಕೆಲವರ ರೀತಿ ಆತ್ಮಕಥೆ ಹೇಳುವ ರೀತಿ. ಸ್ವವಿಷಯಕ್ಕೂ ವ್ಯಕ್ತಿತ್ವ ನಿರೂಪಣೆಗೂ ಪ್ರಾಧಾನ್ಯವಿರುವುದರಿಂದ ಈ ರೀತಿ ಸಹಜವೇ. ಅಡಿಸನ್, ಗೋಲ್ಡ್‌ಸ್ಮಿತ್, ಲ್ಯಾಂಬ್ ಮುಂತಾದವರಲ್ಲಿ ಇದು ಹೆಚ್ಚಾಗಿ ಕಾಣುವುದು. ಪ್ರಕೃತಿಯನ್ನೋ ಪಾತ್ರವನ್ನೋ ಒಂದು ಸನ್ನಿವೇಶವನ್ನೋ ತನ್ನ ಮನಸ್ಸಿಗೆ ಯಾವುದೋ ಒಂದು ಕ್ಷಣದಲ್ಲಿ ತೋರಿದ ಹಾಗೆ ವಿವರಣೆ ಮಾಡುವುದು ಇನ್ನೊಂದು ರೀತಿ. ಮೂರನೆಯ ರೀತಿ, ವಾದ ಹೂಡುವುದು, ಚರ್ಚೆಮಾಡುವುದು, ಜಿಜ್ಞಾಸೆಯ ಬಲೆಯನ್ನು ಹೆಣೆಯುವುದು. ಇದೂ ಮನಸ್ಸಿನ ಚಲನ ವಲನವಾದ್ದರಿಂದಲೂ ಲಘುವಾದ ಹಾಸ್ಯದೊಡಗೂಡಿರುವುದರಿಂದಲೂ ಇಲ್ಲಿ ಕಾಣುವ ವಾದಚಾತುರ್ಯವು ಸಂತೋಷವನ್ನೇ ಕೊಡುವುದು. ಇದು ಚೆಸ್ಟರ್‌ಟನ್ನನ ರೀತಿ. ಕಾಲ್ಪನಿಕವಾದ ಪತ್ರವ್ಯವಹಾರ, ಸ್ವಪ್ನ, ದಿವ್ಯ ದೃಶ್ಯಗಳನ್ನು ವಿವರಿಸುವುದು ಮುಂತಾದ ಇತರ ರೀತಿಗಳೂ ಉಂಟು.

ಲಲಿತ ಪ್ರಬಂಧದ ಲಕ್ಷಣಗಳನ್ನು ಸ್ಥೂಲವಾಗಿ ಹೀಗೆ ವಿವರಿಸಬಹುದು. ಅದು ಉದ್ದವಾಗಿರುವುದಿಲ್ಲ; ಅಡಕವಾಗಿ

ರುತ್ತದೆ. ಯಾವ ವಿಷಯವನ್ನೂ ಆಮೂಲಾಗ್ರವಾಗಿ ಅದು ವಿಮರ್ಶಿಸುವುದಿಲ್ಲ. ಒಂದು ವಿಷಯದ ಕೆಲವು ಮುಖಗಳನ್ನು ಮಾತ್ರ ತೋರಿಸುವುದರಿಂದ ಪ್ರಬಂಧಕ್ಕೆ ಅಪೂರ್ಣತೆ ಇರುವುದು. ಚಿಟ್ಟೆಹುಳುಗಳು ಹೂವಿನ ಬಳಿ ಹಾರಾಡಿ ಹೋಗುವಂತೆ ಪ್ರಬಂಧಕಾರನ ಮನಸ್ಸು ವಿಷಯದ ಹತ್ತಿರ ಕೆಲವು ನಿಮಿಷ ಸುಳಿದಾಡಿ ಸಂತೋಷಪಡುವುದು; ಇತರರಿಗೂ ಆ ಸಂತೋಷವನ್ನು ದಯಪಾಲಿಸುವುದು. ಲಲಿತ ಪ್ರಬಂಧ ಬರೆಯುವುದು ಲೇಖಕನಿಗೆ ಒಂದು ವಿನೋದ ಕ್ರೀಡೆಯೆಂದೂ ಹೇಳಬಹುದು. ಆದರೆ ಆಟಕ್ಕೂ ಮಿತಿಯುಂಟು. ಯಾವುದು ಎಷ್ಟಿರಬೇಕೋ ಅಷ್ಟು ಮಾತ್ರವೇ ಇರುವುದು. ವಿಷಯದ ಪ್ರಸಾರವೂ ಅದನ್ನು ಹೇಳುವ ರೀತಿಯೂ ಹೊಂದಿಕೊಂಡು ಪ್ರಬಂಧ ಸುಂದರವೂ ರಮ್ಯವೂ ಸ್ವತಂತ್ರವೂ ಆದ ಒಂದು ಸಾಹಿತ್ಯ ವಿಭೇದವಾಗುವುದು. ಪ್ರಬಂಧ ರಚನೆಯಲ್ಲಿ ಹೆಚ್ಚು ಸ್ವಾತಂತ್ರ್ಯ ಉಂಟು. ಲೇಖಕನು ಕಠಿಣ ನಿಯಮಗಳಿಗೆ ಶರಣಾಗಬೇಕಾದ್ದಿಲ್ಲ. ಪ್ರಬಂಧ ಒಂದು ನಿರ್ಬಂಧವಿಲ್ಲದ ಸರಸ ಸಲ್ಲಾಪ; ಆ ಸಲ್ಲಾಪ ಗಾಳಿಯಲ್ಲಿ ತೂರಿಹೋಗದಂತೆ ಅದನ್ನು ಬರೆದಿಟ್ಟಿದೆ ಅಷ್ಟೆ. ಆದರೆ ಪ್ರಬಂಧಕ್ಕೂ ಸಾಹಿತ್ಯಕ್ಕೆ ಯುಕ್ತವಾದ ರೂಪ ರಚನೆಗಳುಂಟು. ಈಚಿನವರು ಇವಕ್ಕೆ ಹೆಚ್ಚು ಗಮನ ಕೊಡುತ್ತಿರುವರು.

ಆಡಿಸನ್ನಿನ ಪ್ರಬಂಧಗಳ ರಚನೆ ಸಾಮಾನ್ಯವಾಗಿ ಈ ರೀತಿ ಇರುವುದು. ಮೊದಲು ಒಂದು ವಿಷಯವನ್ನು ಕುರಿತ ಕೆಲವು ಅಭಿಪ್ರಾಯಗಳನ್ನು ಹೇಳಿ ಲೇಖನವನ್ನು ಅವನು ಪ್ರಾರಂಭಿಸುತ್ತಾನೆ. ಆಮೇಲೆ ಕೆಲವು ಉದಾಹರಣೆಗಳನ್ನು ಕೊಡುತ್ತಾನೆ. ಕಡೆಯಲ್ಲಿ ಒಂದು ಸಿದ್ಧಾಂತವನ್ನೋ ನೀತಿ

ಯನ್ನೋ ಸ್ಥಾಪಿಸುತ್ತಾನೆ. ಅವನ ಮುಖ್ಯ ಉದ್ದೇಶ ಜನರನ್ನು ಉತ್ತಮಗೊಳಿಸುವುದು. ಆದ್ದರಿಂದ ಆ ರೀತಿಯ ರಚನೆ ಅವನಿಗೆ ಸರಿಹೋಯಿತು. ಈ ಮೂರು ಭಾಗಗಳೂ ಅವನ ಪ್ರತಿಯೊಂದು ಪ್ರಬಂಧದಲ್ಲಿಯೂ ಸಮಾನ್ಯವಾಗಿ ಇರುವುವು. ಸ್ಥಾನ ವ್ಯತ್ಯಾಸ ವಾಗಿರಬಹುದು—ಅಷ್ಟೆ. ವರ್ಣನೆ ಮಾಡುವುದೋ, ಕಥೆ ಹೇಳುವುದೋ ಉದ್ದೇಶವಾಗಿ ಉಳ್ಳ ಪ್ರಬಂಧದಲ್ಲಿ ಈ ಭಾಗ ಗಳಿಲ್ಲದಿದ್ದರೂ ಅದಕ್ಕೂ ಒಂದು ನಿರ್ದಿಷ್ಟ ರಚನೆ ಉಂಟು.

ತಾರ್ಕಿಕವಾದ ಪ್ರಬಂಧದಲ್ಲಿ ಎರಡು ಪಕ್ಷದ ವಾದ ವಿವಾದಗಳೂ ತಕ್ಕ ಉದಾಹರಣೆಗಳೂ ಇರುವುವು. ಯಾವ ತರದ ರಚನೆಯ ಅಚ್ಚುಕಟ್ಟು ಬೇಕಾದರೂ ಇರಲಿ ಪ್ರಬಂಧದಲ್ಲಿ ಕವಿಯ ಮನಸ್ಸು, ಅದು ಲೋಕವನ್ನು ಲಕ್ಷಿಸುವ ವಿಧಾನ, ಇವೆರಡೇ ಮುಖ್ಯ. ಆದ್ದರಿಂದ ಪ್ರಬಂಧವನ್ನು ವ್ಯಾಸಂಗ ಮಾಡುವಾಗ ಮೊದಲು ಗಮನಿಸಬೇಕಾದ್ದು ಲೇಖಕನ ಆತ್ಮದ ವಿಶೇಷ ಲಕ್ಷಣವನ್ನ. ಅವನ ಮನೋದೃಷ್ಟಿಯನ್ನ. ಒಂದು ವಿಚಾರವನ್ನು ಕುರಿತು ಅವನ ಅಭಿಪ್ರಾಯವೇನೆಂಬುದನ್ನು ನಾವು ಮೊದಲು ತಿಳಿಯಬೇಕು. ಆಮೇಲೆ ಗಮನಿಸಬೇಕಾದ್ದು ಆ ಅಭಿಪ್ರಾಯದ ಬೆಳವಣಿಗೆ, ಸುಪುಷ್ಟಿ, ಸೌಂದರ್ಯ. ಕಡೆಯ ಅಂಶ ಅವನ ಶೈಲಿ. ಮನುಷ್ಯ ಹೇಗೋ ಅವನ ಶೈಲಿ ಹಾಗೆ ಎಂದು ಹೇಳುವ ಮಾತು ಪ್ರಬಂಧಕ್ಕೆ ಚೆನ್ನಾಗಿ ಅನ್ವಯಿಸು ವುದು.

---

## ೧. ಮೈಕೇಲ್ ಮಾಂಟೇನ್

'ಎಸ್ಸೆ' ಅಥವಾ ಪ್ರಬಂಧ ಎನ್ನುವ ಹೆಸರನ್ನು ಮೊಟ್ಟ ಮೊದಲು ಉಪಯೋಗಿಸಿ ಹೊಸ ಬಗೆಯ ಸಾಹಿತ್ಯವನ್ನು ಪ್ರಪಂಚಕ್ಕೆ ಕೊಟ್ಟವನು ಮೈಕೇಲ್ ಮಾಂಟೇನ್. ಇವನು ಫ್ರಾನ್ಸಿನವನು. ಇವನ ಪ್ರಬಂಧಮಾಲೆಯ ಮುನ್ನುಡಿ ಆ ಬಗೆಯ ಸಾಹಿತ್ಯದ ಲಕ್ಷಣಗಳನ್ನು ಮುದ್ದಾಗಿ ತಿಳಿಸುವುದು.

### ಗ್ರಂಥಕರ್ತನಿಂದ ಓದುಗನಿಗೆ

ಓದುಗನೆ, ಇಗೊ ಇದೊಂದು ಒಳ್ಳೆಯ ಪುಸ್ತಕ. ಆರಂಭಕ್ಕೆ ಮೊದಲೆ ನಿನಗೆ ಒಂದು ಎಚ್ಚರಿಕೆ. ಈ ಪುಸ್ತಕ ಬರೆಯುವುದರಲ್ಲಿ ನನ್ನ ಅಭಿಲಾಷೆ ಕೇವಲ ವೈಯುಕ್ತಿಕವಾದ್ದು, ಸರಳವಾದ್ದು; ನಿನಗೆ ಉಪಕಾರ ಮಾಡಬೇಕು, ನಾನು ಕೀರ್ತಿಯನ್ನು ಗಳಿಸಬೇಕು ಮುಂತಾದ ಯಾವ ಯೋಚನೆಯೂ ನನಗಿಲ್ಲ. ಆ ಬಗೆಯ ಆಶೋತ್ತರಗಳು ನನ್ನ ಶಕ್ತಿಗೆ ಮೀರಿದುವು. ಇದನ್ನು ನಾನು ಬರೆದಿರುವುದು ನನ್ನ ಬಂಧುಗಳಿಗೆ ನನ್ನ ಮಿತ್ರವರ್ಗಕ್ಕೆ. ನನ್ನನ್ನು ಕಳೆದುಕೊಂಡಮೇಲೆ—ಆ ನಷ್ಟ ಅವರಿಗೆ ಇಷ್ಟರಲ್ಲಿಯೇ ಸಂಭವಿಸಬಹುದು—ಈ ಪುಸ್ತಕದಲ್ಲಿ ನನ್ನ ವಿವಿಧ ಸ್ಥಿತಿ ಗತಿಗಳನ್ನೂ ನನ್ನ ಮನಸ್ಸಿನ ವಿವಿಧ ಭಾವನೆಗಳನ್ನೂ ಅವರು ಕಾಣ ಬಹುದು. ಇದರ ಮೂಲಕ ನಾನು ಅವರ ನೆನಪಿನಲ್ಲಿ ಈಗಿರುವುದಕ್ಕಿಂತ ಹೆಚ್ಚು ಪೂರ್ಣವಾಗಿ ಉಳಿಯುವೆನು. ನನ್ನ ಪರಿಚಯ ಅವರಲ್ಲಿ ಹೆಚ್ಚು ಜೀವಂತವಾಗಿ ಉಳಿಯುವುದು. ಸ್ವಂತ ಮೇಲ್ಮೆಗಾಗಿ ಲೋಕದ ಒಳ್ಳೆಯ ಅಭಿಪ್ರಾಯವನ್ನು ಪಡೆಯುವ ಆಸೆ ನನಗೆ ಇದ್ದಿದ್ದರೆ ನನ್ನನ್ನು ನಾನು ಹೆಚ್ಚು ಬೆಡಗಿನಿಂದ ವರ್ಣಿಸಿಕೊಳ್ಳುತ್ತಿದ್ದೆ; ಹೆಚ್ಚು ಗಾಂಭೀರ್ಯ,

ಮರ್ಯಾದೆಗಳಿಂದ ಲೇಖನವನ್ನು ಬರೆಯುತ್ತಿದ್ದೆ. ನನ್ನ ಆಶೆಯಾದರೋ ವರ್ಣನೆಯೆಲ್ಲವೂ ನೈಜವಾಗಿ, ಸರಳವಾಗಿ, ಸಾಮಾನ್ಯ ಶೈಲಿಯಲ್ಲಿರ ಬೇಕೆಂಬುದು; ಬರವಣಿಗೆಯಲ್ಲಿ ವಿವಾದ, ಕಲೆ, ಕೌಶಲ್ಯ ಯಾವುದೂ ಇರಬಾರದು ಎಂಬುದು. ಏಕೆಂದರೆ ನಾನು ವರ್ಣಿಸುವುದು ನನ್ನನ್ನೇ, ನನ್ನ ಬಾಳಿನಲ್ಲಿದ್ದ ಅಪೂರ್ಣತೆಯನ್ನು ಅಲ್ಲಿ ಓದಬೇಕು, ನನ್ನ ನೈಜವಾದ ಸ್ವರೂಪವನ್ನು ಅಲ್ಲಿ ಕಾಣಬೇಕು. ಅಂದರೆ ಲೋಕಮರ್ಯಾದೆಯ ಮಿತಿಗೆ ಒಳಪಟ್ಟು ಎಷ್ಟು ವರ್ಣಿಸಬಹುದೋ ಅಷ್ಟುಮಾತ್ರ ವರ್ಣಿಸಿದ್ದೇನೆ. ಪ್ರಕೃತಿಯ ನಿರ್ದೋಷವಾದ ನಿಯಮಕ್ಕೆ ಮಾತ್ರ ಒಳಪಟ್ಟು, ನಿರ್ಲಜ್ಜೆಯ, ಸ್ವಾತಂತ್ರ್ಯವನ್ನನುಭವಿಸುವ ಜನಾಂಗಗಳ ಮಧ್ಯೆ ಬಾಳುವ ಅದೃಷ್ಟ ನನ್ನದಾಗಿದ್ದರೆ, ಖಂಡಿತವಾಗಿ ಯಾವುದನ್ನೂ ಬಿಡದೆ ವರ್ಣಿಸಿ ಬಿಡುತ್ತಿದ್ದೆ. ಓದುಗನೇ, ಇಂತು ನನ್ನ ಪುಸ್ತಕಕ್ಕೆ ನಾನೇ ಆಧಾರ. ಇಷ್ಟು ಅಲ್ಪವಾದ ಉಪಯೋಗವಿಲ್ಲದ ವಿಷಯವನ್ನು ಓದುವುದರಲ್ಲಿ ನಿನ್ನ ಕಾಲವನ್ನು ವಿನಿಯೋಗಿಸುವುದಕ್ಕೆ ಯಾವ ಕಾರಣವೂ ಇಲ್ಲ.

ಆದುದರಿಂದ ನಿನಗೆ ವಂದನೆ.

೧—೩—೧೫೮೦. ಮಾಂಟೇನ್.

ಮಾಂಟೇನ್ ಶ್ರೀಮಂತಕುಲದಲ್ಲಿ ಹುಟ್ಟಿದವನು. ವಂಶಗತವಾಗಿ ಬಂದ ವ್ಯಾಧಿಯಲ್ಲಿ ನೊಂದವನು. ಆದರೆ ಅವನ ಬರಹದಲ್ಲಿ ನೋವಿನ ಕುರುಹು ಸ್ವಲ್ಪವೂ ಇಲ್ಲ. ತನ್ನ ಕಾಲದಲ್ಲಿ ಮತ ಮತ್ತು ರಾಜಕೀಯ ಸಂಬಂಧವಾದ ಕಲಹಗಳು ಅನೇಕವಿದ್ದರೂ ಅವುಗಳ ಆಚೆ ಅವನು ನಿಂತಿದ್ದ. ಆದರೆ ವಿಶೇಷ ಶ್ರದ್ಧೆಯ ಪ್ರೇಕ್ಷಕನಾಗಿದ್ದ. ಅಪಾರ ಜ್ಞಾನವನ್ನು ಕುರಿತು ಮಾತನಾಡುವಾಗ ನನಗೇನು ಗೊತ್ತು ?—ಎಂದು ಹೇಳುತ್ತಿದ್ದರೂ ಅವನೊಬ್ಬ ದಾರ್ಶನಿಕ. ತನ್ನ ಆಳವಾದ ಅನುಭವವನ್ನೂ ಗಹನವಾದ ಭಾವನೆಗಳನ್ನೂ ತನ್ನನ್ನೇ ವಿಮರ್ಶಿಸುವ

ನೆವದಲ್ಲಿ ಪ್ರಕಾಶಪಡಿಸುತ್ತಿದ್ದಾನೆ. ಆಗಿನಿಂದ ಈಗಿನವರೆಗೂ ಬರಹಗಾರರ ಮೇಲೆ ಅವನ ಪ್ರಭಾವ ಬಹಳ ದೊಡ್ಡದಾಗಿದೆ. ಅವನ ಶೈಲಿಗೆ ಒಂದು ಉದಾಹರಣೆ ಸಾಕು:

## ಸೋಮಾರಿತನ

ಸಾಗುವಳಿಯಾಗದ ಹೊಲಗಳನ್ನು ನಾವು ನೋಡಿದ್ದೇವೆ. ಕಾಡು ಗಿಡಗಳೂ ಉಪಯೋಗವಿಲ್ಲದ ಕುರುಚಲೂ ಅಲ್ಲಿ ಬೆಳೆಯುವುವು. ಆ ಭೂಮಿಯಿಂದ ಆದಾಯ ಬರಬೇಕಾದರೆ ಅದನ್ನು ವ್ಯವಸಾಯಮಾಡ ಬೇಕು; ನಮ್ಮ ಪ್ರಯೋಜನಕ್ಕೆ ಬರುವ ಪೈರಿನ ಬೀಜವನ್ನು ಬಿತ್ತನೆ ಮಾಡಬೇಕು. ಮನಸ್ಸಿನ ಸ್ಥಿತಿಯೂ ಹೀಗೆಯೇ. ಅದನ್ನು ಹದ್ದಿನಲ್ಲಿ ಡಲು ಯಾವುದಾದರೂ ಒಂದು ವಿಷಯದ ಚರ್ಚೆಯನ್ನು ಅದಕ್ಕೆ ಹತ್ತಿ ಸಬೇಕು. ಇಲ್ಲದಿದ್ದರೆ ಅದು ವಿಶಾಲಭಾವನಾಪ್ರಪಂಚದ ನಾನಾ ಪ್ರದೇಶ ಗಳಲ್ಲಿ ಅಂಕೆ ಇಲ್ಲದೆ ಅಲೆಯುವುದು. ಆ ಅಲೆದಾಟದ ಉದ್ರೇಕದಲ್ಲಿ ಬಗೆಬಗೆಯ ತಿಳಿಗೇಡಿತನವೂ ಹುಚ್ಚೂ ಉಂಟಾಗುವುವು. ಗೊತ್ತಾದ ಒಂದು ಮಿತಿಗೊಳಗಾಗದ ಮನಸ್ಸು ಸುಲಭವಾಗಿ ನಾಶವಾಗುವುದು. ಯಾವುದು ನೂರಾರು ಕಡೆಯಲ್ಲಿ ವಿಹರಿಸಲು ಯತ್ನಿಸುವುದೋ ಅದಕ್ಕೆ ಒಂದು ಕಡೆ ಇರಲು ಸಾಧ್ಯವಿಲ್ಲ.

ವಿಶ್ರಾಂತಿಗಾಗಿ ನಾನು ಮನೆಗೆ ಬಂದು ಹೆಚ್ಚು ದಿನಗಳಾಗಲಿಲ್ಲ. ನನಗಿದ್ದ ಆಸೆ ಇದು: ಯಾವ ಕೆಲಸಕ್ಕಾಗಿಯೂ ಶ್ರಮಪಡದೆ ಇರುವು ದನ್ನು ಸಾಧ್ಯವಾದಷ್ಟು ಅನುಸರಿಸಬೇಕೆಂಬುದು. ನನ್ನ ಬಾಳು ಮುಗಿ ಯುತ್ತ ಬಂದಿದೆ. ಉಳಿದಿರುವ ದಿನಗಳನ್ನು ಏಕಾಂತದಲ್ಲಿ—ಶಾಂತಿ ಯಲ್ಲಿ ಕಳೆಯಬೇಕು. ನನ್ನ ಆತ್ಮಕ್ಕೆ ಇದಕ್ಕಿಂತ ಹೆಚ್ಚಿನ ಅನುಗ್ರಹ ವನ್ನು ತೋರಿಸಲಾರೆನೆಂದು ನನ್ನ ಭಾವನೆಯಾಗಿತ್ತು. ಏಕೆಂದರೆ, ಆಗ ಅದರ ಸೋಮಾರಿತನಕ್ಕೆ ಪೂರ್ಣಸ್ವಾತಂತ್ರ್ಯ. ತನಗೆ ಇಷ್ಟವಾದ ವಿನೋದ

ವನ್ನು ಆರಿಸಿಕೊಂಡು ಅನುಭವಿಸಬಹುದು. ಮನಸ್ಸಿಗೆ ಒಪ್ಪುವ ಒಂದು ಕಡೆ ನೆಲಸಬಹುದು. ದೀರ್ಘಕಾಲದಿಂದ ಗಳಿಸಿದ ಅನುಭವದಿಂದ ನನ್ನ ಆತ್ಮ ಬೆಳೆದಿದ್ದುದರಿಂದಲೂ ಹಣ್ಣಾಗಿದ್ದುದರಿಂದಲೂ ಈ ಕೆಲಸ ಅದಕ್ಕೆ ಸುಲಭವೆಂದು ನನ್ನ ಭಾವನೆಯಾಗಿತ್ತು. ಆದರೆ ಮೈಗಳ್ಳತನ ಹೆಚ್ಚಿದಷ್ಟೂ ಮನಸ್ಸಿನ ತೂಗಾಟ ಹೆಚ್ಚುವುದೆಂಬುದು ನನ್ನ ಅನುಭವಕ್ಕೆ ಬಂತು.

ನನ್ನ ಆತ್ಮದ ಸ್ಥಿತಿ ನನ್ನ ನಿರೀಕ್ಷಣೆಗೆ ವಿರೋಧವಾಯಿತು. ಅದರ ವರ್ತನೆ ಚಂಚಲೆಯೂ ಅಂಕೆಯಿಲ್ಲದವಳೂ ಆದ ಹೆಂಗಸಿನ ವರ್ತನೆಯಂತಾಯಿತು. ಅದರ ಸ್ವಾತಂತ್ರ್ಯ ನೂರ್ಮಡಿ ಹೆಚ್ಚಿತು. ವಿಚಿತ್ರವಾದ ಅನೇಕ ವ್ಯರ್ಥ ಕಲ್ಪನೆಗಳೂ ನೀತಿನಿಯಮಗಳಿಲ್ಲದ ವಿಲಕ್ಷಣವಾದ ಪಿಶಾಚಿಗಳೂ ನಿಷ್ಕಾರಣವಾಗಿ ಒಂದರ ಮೇಲೆ ಒಂದು ನುಗ್ಗಿಬಂದು ಮನಸ್ಸನ್ನು ತುಂಬಿದುವು. ಅವುಗಳ ಅವಿವೇಕವನ್ನೂ ವೈಚಿತ್ರವನ್ನೂ ಸಾವಧಾನವಾಗಿ ಪರೀಕ್ಷಿಸಲು ಒಂದು ಪುಸ್ತಕದಲ್ಲಿ ಬರೆಯಲು ಆರಂಭಿಸಿದ್ದೇನೆ. ಬದುಕಿದ್ದರೆ ಇದನ್ನೆಲ್ಲ ತೋರಿಸಿ ನನ್ನ ಜೀವನ ನಾಚಿಕೆಪಡುವಂತೆ ಮಾಡಬಹುದೆಂದು ನನ್ನ ಆಸೆ.

ಮನುಷ್ಯ ಮಡಿದ ಮೇಲೆ ಮನಸ್ಸಿಗೆ ವಿಶ್ರಾಂತಿ ಬರುವುದೋ ಇಲ್ಲವೋ ನಮಗೆ ತಿಳಿಯದು. ಆದರೆ ಜೀವಂತನಾಗಿರುವ ವರೆಗೂ ಅವನಿಗೆ ವಿಶ್ರಾಂತಿ ಇಲ್ಲವೆನ್ನುವ ಅಂಶ ಈ ಪ್ರಬಂಧದಿಂದ ಎಲ್ಲರಿಗೂ ಮನಗಾಣುವುದು. ಕೆಲಸದಿಂದ ಬಿಡುಗಡೆಗೊಂಡ ಮುದುಕರು ಟೆನಿಸನ್ ಕವಿಯ ಯೂಲಿಸಿಸ್ಸಿನಂತೆ ಆಮರಣಾಂತವೂ ಜ್ಞಾನಾರ್ಜನೆ ಮಾಡಬೇಕು. ಮಾಡದಿದ್ದರೆ ಅವರ ಮನಸ್ಸು ನಿಷ್ಪ್ರಯೋಜಕ ಕಲ್ಪನೆಗಳ ತವರಾಗುವುದು.

---

## ೩. ಫ್ರಾನ್ಸಿಸ್ ಬೇಕನ್

ಮಾಂಟೇನಿನ ಮೇಲ್ಪಂಕ್ತಿಯನ್ನನುಸರಿಸಿ ಇಂಗ್ಲಿಷಿನಲ್ಲಿ ಪ್ರಬಂಧವನ್ನು ಮೊದಲು ಬರೆದವನು ಫ್ರಾನ್ಸಿಸ್ ಬೇಕನ್. ಇವನು ಬಹು ಪ್ರತಿಭಾಶಾಲಿ. ಅನೇಕ ಶಾಸ್ತ್ರಗಳಲ್ಲಿ ಅದ್ವಿತೀಯ ಪಂಡಿತ. ಈಗಿನ ವಿಜ್ಞಾನ ಶಾಸ್ತ್ರದ ಪ್ರಯೋಗಪದ್ಧತಿಯನ್ನು ಏರ್ಪಡಿಸಿದ ಅಗ್ರಗಾಮಿಗಳಲ್ಲಿ ಇವನೊಬ್ಬ. ಷೇಕ್ಸ್‌ಪಿಯರ್ ಎಂಬ ಕವಿ ಇರಲೇ ಇಲ್ಲ; ಬೇಕನ್ನನೇ ಆ ನಾಟಕಗಳನ್ನು ರಚಿಸಿದನು ಎಂಬ ಊಹೆ ಕೆಲವರಲ್ಲಿ ಈಗಲೂ ಇದೆ. ಉನ್ನತ ಪದವಿಗಳಲ್ಲಿದ್ದು ಬಹುವಿಧದ ರಾಜಮರ್ಯಾದೆಯನ್ನು ಪಡೆದು ವಿಶೇಷ ಲೋಕಾನುಭವವನ್ನು ಆರ್ಜಿಸಿದ ಜ್ಞಾನಿ ಬೇಕನ್. ಮಾಂಟೇನನ್ನೆ ಮೇಲ್ಪಂಕ್ತಿಯನ್ನಾಗಿ ತೆಗೆದುಕೊಂಡರೂ ಅವನ ಶೈಲಿಯ ಸರಳತೆ, ಹಾಸ್ಯವ್ಯುತ್ಪತ್ತಿ ಯಾವುವೂ ಇವನಲ್ಲಿಲ್ಲ. ಆದರೂ ಬೇಕನ್ನನ ಅನುಭವ ಆಳವಾಗಿಯೂ ಬರವಣಿಗೆ ಅರ್ಥವತ್ತಾಗಿಯೂ ಇದ್ದುದರಿಂದ ಅವನ ಒಂದೊಂದು ವಾಕ್ಯವೂ ಸಾರಭೂತವಾದ ಆಣಿ ಮುತ್ತಿನ ಹಾಗೆ ಇದೆ. ಈ ಪ್ರಬಂಧವನ್ನು ನೋಡಿ.

### ವ್ಯಾಸಂಗ

ವ್ಯಾಸಂಗದ ಪ್ರಯೋಜನ ಸಂತೋಷ, ಅಲಂಕಾರ, ದಕ್ಷತೆ. ಅಂದರೆ ಅದು ಏಕಾಂತದಲ್ಲಿ ವಿಶ್ರಮಿಸಿಕೊಳ್ಳುವಾಗ ಸಂತೋಷಕೊಡುವುದು; ಸಂಭಾಷಣೆಯಲ್ಲಿ ಭೂಷಣವಾಗುವುದು; ಕೆಲಸಕಾರ್ಯಗಳಲ್ಲಿ ಸಾಮರ್ಥ್ಯವನ್ನುಂಟುಮಾಡುವುದು. ನಿಪುಣರು ಒಂದೊಂದು ವಿಚಾರವನ್ನೂ ಆಮೂಲಾಗ್ರವಾಗಿ ವಿಮರ್ಶೆಮಾಡಬಹುದು, ತೀರ್ಮಾನಕ್ಕೆ ಬರ

ಬಹುದು, ಸಾಧಿಸಬಹುದು. ಆದರೆ ಉಪಯುಕ್ತತೆ, ವಿವೇಕ, ಕಾರ್ಯ ದಕ್ಷತೆ, ಮೇಲ್ವಿಚಾರಣೆಯ ಶಕ್ತಿ ಇವು ಉತ್ತಮವಾಗಿರುವುದು ಸುಶಿಕ್ಷಿತ ರಲ್ಲಿ. ವ್ಯಾಸಂಗದಲ್ಲಿ ಬಹಳ ಕಾಲಕಳೆಯುವುದು ಸೋಮಾರಿತನ; ಆಡಂಬರಕ್ಕಾಗಿಯೆ ಅದನ್ನುಪಯೋಗಿಸುವುದು ಜಂಭ; ಅದರ ನಿಯಮ ವನ್ನನುಸರಿಸಿಯೆ ತೀರ್ಮಾನ ಹೇಳುವುದು ಪಂಡಿತನ ಮನೋಭಾವ. ವ್ಯಾಸಂಗ ಪ್ರಕೃತಿಯನ್ನು ಪೂರ್ಣಮಾಡುವುದು, ಅದು ಅನುಭವದ ಸಹಾಯದಿಂದ ಪರಿಪೂರ್ಣವಾಗುವುದು. ಸ್ವಾಭಾವಿಕವಾದ ಶಕ್ತಿ ಸಹಜ ವಾಗಿ ಬೆಳೆಯುವ ಗಿಡದಂತೆ; ಅದಕ್ಕೆ ವ್ಯಾಸಂಗದ ಕೃಷಿ ಆವಶ್ಯಕ. ವ್ಯಾಸಂಗ ತೋರಿಸುವ ಮಾರ್ಗ ಸ್ಥೂಲವಾದದ್ದು; ನಿರ್ದಿಷ್ಟವಾದ್ದಲ್ಲ. ಆದರೆ ಅದು ಅನುಭವದೊಡನೆ ಕೂಡಿದ್ದರೆ ಹಾಗಿರುವುದಿಲ್ಲ. ವ್ಯಾಸಂಗ ವನ್ನು ಯುಕ್ತಿವಂತರು ನಿಂದಿಸುವರು ; ಸಾಧಾರಣಜನ ಮೆಚ್ಚುವರು ; ವಿವೇಕಿಗಳು ಉಪಯೋಗಿಸುವರು. ಏಕೆಂದರೆ ವ್ಯಾಸಂಗ ತನ್ನ ಉಪ ಯೋಗವನ್ನು ತಾನೆ ಹೇಳಿಕೊಡುವುದಿಲ್ಲ. ಅದರ ಉಪಯೋಗವೆಂದರೆ ಅದಕ್ಕೆ ಹೊರಗಿರುವ, ಅದಕ್ಕೆ ಮೇಲಾಗಿರುವ, ಚಿತ್ತವಿಟ್ಟು ನೋಡು ವುದರಿಂದ ಲಭಿಸುವ ವಿವೇಕ. ಸುಮ್ಮನೆ ವಿರೋಧಿಸುವುದಕ್ಕೆ, ಬಾಯಿ ಮುಚ್ಚಿಸುವುದಕ್ಕೆ ಅಥವಾ ನಂಬುವುದಕ್ಕೆ, ಹೇಳಿದ್ದನ್ನೆಲ್ಲಾ ಒಪ್ಪುವುದಕ್ಕೆ ಅಥವಾ ಮಾತನಾಡುವುದಕ್ಕೆ, ಸಂಭಾಷಣೆಗೆ—ಇವಕ್ಕೆ ಮಾತ್ರವೇ ವ್ಯಾಸಂಗ ಮಾಡಬೇಡಿ. ವಿಚಾರಮಾಡುವುದಕ್ಕೂ ಬಲಾಬಲಗಳನ್ನು ತೂಕಮಾಡುವುದಕ್ಕೂ ವ್ಯಾಸಂಗಮಾಡಿ. ಕೆಲವು ಪುಸ್ತಕಗಳು ರುಚಿ ನೋಡಲು ಮಾತ್ರ ತಕ್ಕವು; ಇನ್ನು ಕೆಲವು ಒಟ್ಟಿಗೆ ನುಂಗಲು ತಕ್ಕವು; ಮತ್ತೆ ಕೆಲವು ಚೆನ್ನಾಗಿ ಅಗಿದು ಜೀರ್ಣಿಸಿಕೊಳ್ಳಲು ತಕ್ಕವು. ಎಂದರೆ ಕೆಲವು ಪುಸ್ತಕಗಳ ಭಾಗಗಳನ್ನು ಮಾತ್ರ ಓದಬೇಕು. ಇನ್ನು ಕೆಲವು ಗಳಲ್ಲಿ ಬಿಡಿವಿವರಗಳನ್ನು ಬಿಟ್ಟು ಮುಖ್ಯವಾದ್ದನ್ನು ಮಾತ್ರ ಓದ ಬೇಕು. ಮತ್ತೆಕೆಲವನ್ನು ಸಂಪೂರ್ಣವಾಗಿ ಶ್ರದ್ಧೆಯಿಂದಲೂ ಎಚ್ಚರಿಕೆ

ಯಿಂದಲೂ ಓದಬೇಕು. ಕೆಲವು ಪುಸ್ತಕಗಳನ್ನು ಇತರರ ಮೂಲಕ ಓದಿಸಿ ಕೇಳಬಹುದು. ಅವುಗಳ ಸಾರಾಂಶವನ್ನು ಅವರಿಂದ ತಿಳಿಯಬಹುದು. ಆದರೆ ಅದು ಮುಖ್ಯವಲ್ಲದ ವಿಚಾರಗಳಲ್ಲಿ, ಕಡಮೆ ಮಟ್ಟದ ಪುಸ್ತಕಗಳಲ್ಲಿ. ಬಟ್ಟಿಯಿಳಿಸಿದ ಪುಸ್ತಕಗಳು, ಬಟ್ಟಿಯಿಳಿಸಿದ ನೀರನಂತೆ, ರುಚಿಯಿರುವುದಿಲ್ಲ. ವ್ಯಾಸಂಗ ಮನುಷ್ಯನನ್ನು ಪುಷ್ಟನನ್ನಾಗಿ ಮಾಡುವುದು; ಸಂಭಾಷಣೆ ಜಾಗೃತನನ್ನಾಗಿ ಮಾಡುವುದು ; ಬರೆಯುವುದು ಖಂಡಿತ ಜ್ಞಾನಿಯನ್ನಾಗಿ ಮಾಡುವುದು.

ಇಂಗ್ಲೆಂಡಿನಲ್ಲಿ ಈ ರೀತಿ ಬರೆದವನು ಬೇಕನ್ ಒಬ್ಬನೇ. ಮಾಂಟೇನಿನ ಮೇಲ್ಪಂಕ್ತಿಯನ್ನನುಸರಿಸಿ ಅವನು ಬರೆದರೂ, ಲಲಿತ ಪ್ರಬಂಧದ ತಿರುಳಾದ ಸ್ವವಿಷಯವನ್ನೂ, ಸ್ವಂತಜೀವನದ ಅನುಭವವನ್ನೂ ಇವನು ಪ್ರತ್ಯಕ್ಷವಾಗಿ ಸೂಚಿಸದೆ ಬಿಟ್ಟಿದ್ದಾನೆ. ಪ್ರಬಂಧ ಬರೆಯುವವನು ತನ್ನ ದೃಷ್ಟಿಗೆ ಗೋಚರವಾಗುವ ಪ್ರಪಂಚವನ್ನು ತನ್ನದೇ ಆದ ಒಂದು ಸುಲಭ ಶೈಲಿಯಲ್ಲಿ ಲಘುವಾಗಿ ವಿನೋದವಿವೇಕಗಳೊಡನೆ ಚಿತ್ರಿಸುವನು. ಮಧ್ಯೆ ಕಥೆ ಉಪಕಥೆಗಳೂ ಅಪ್ರಸ್ತುತ ವಿಚಾರಗಳೂ ಬರುವುವು. ಸ್ಥೂಲದೃಷ್ಟಿಗೆ ಪ್ರಬಂಧದಲ್ಲಿ ಯಾವೊಂದು ರೂಪು ರಚನೆ ಕಾಣದೆ ಹೋದರೂ ಅದು ಇದ್ದೇ ಇರುವುದು.

---

## ೪. ಏಬ್ರಮ್ ಕೌಲಿ

ಬೇಕನ್ನಿನ ಗಂಭೀರವಾದ ಶೈಲಿಯನ್ನು ಬಿಟ್ಟು ಮಾಂಟೇನಿನ ಮಾರ್ಗವನ್ನು ಹಿಡಿದು ಸ್ವವಿಷಯವನ್ನು ಪ್ರಬಂಧದಲ್ಲಿ ಹೇಳತೊಡಗಿದವನು ಏಬ್ರಮ್ ಕೌಲಿ. ಇಲ್ಲಿ ಅವನ ಒಂದು ಪ್ರಬಂಧಭಾಗವನ್ನು ಕೊಟ್ಟಿದೆ.

## ಸ್ವವಿಷಯ

ಯಾವ ಮನುಷ್ಯನಿಗೂ ಸ್ವವಿಷಯವನ್ನು ಬರೆಯುವುದು ಕಷ್ಟ; ಅದು ಅತಿಸೂಕ್ಷ್ಮವಾದ ಕೆಲಸ. ಲೋಪದೋಷಗಳನ್ನು ಹೇಳಿಕೊಳ್ಳುವುದು ತನ್ನ ಹೃದಯಕ್ಕೆ ಸಮ್ಮತವಲ್ಲ. ಅದರಿಂದ ಮನಸ್ಸಿಗೆ ನೋವಾಗುವುದು. ತನ್ನ ಸ್ತೋತ್ರವನ್ನು ತಾನೇ ಮಾಡಿಕೊಂಡರೆ ಅದು ಓದುಗನ ಕಿವಿಗೆ ಇಂಪಾಗಿರುವುದಿಲ್ಲ. ನಾನಾದರೋ ಈ ಹಿಂಸೆಗೆ ಅವನನ್ನು ಗುರಿ ಮಾಡಲಾರೆ. ಆ ತರದ ಒಣಜಂಭಕ್ಕೆ ನನ್ನ ಮನಸ್ಸು, ದೇಹ ಭಾಗ್ಯ, ಯಾವುದೂ ಎಡೆಕೊಡುವುದಿಲ್ಲ. ನನಗೆ ಈ ತೃಪ್ತಿ ಇದೆ: ಆತ್ಮಪ್ರಶಂಸೆಗೆ ಸಂಬಂಧಪಟ್ಟ ನನ್ನ ದೋಷಗಳಾವುವೂ ಇತರರ ಗಮನಕ್ಕೆ ಬರುವಷ್ಟಿಲ್ಲ; ಅವು ಯಾವಾಗಲೂ ನನ್ನನ್ನು ನಾಚಿಕೆಗೆ ಗುರಿಮಾಡಿಲ್ಲ. ಅಲ್ಲದೆ ಇಲ್ಲಿ ನನ್ನ ವಿಚಾರ ಹೇಳುವುದೆಂದರೆ, ನನ್ನ ಹಿಂದಿನ ಲೇಖನಗಳನ್ನು ಕುರಿತು ಮಾತ್ರ.

ಹೀಗೆ ಆ ಪ್ರಬಂಧದಲ್ಲಿ ತನ್ನ ಕಾವ್ಯಗಳನ್ನು ಕುರಿತು ಬರೆದಿದ್ದಾನೆ. ಪ್ರಕಟವಾಗಿರುವ ಅವನ ಗದ್ಯ ಲೇಖನ ಕಡಮೆ. ಆದರೂ ಅದರಲ್ಲಿ ಇಂಗ್ಲಿಷಿನ ಹೊಸ ಗದ್ಯವನ್ನು ಬೆಳೆಸಿದ ಗುಣಗಳೆಲ್ಲ ಇವೆ. ಆವರೆಗೆ ಇಂಗ್ಲಿಷಿನಲ್ಲಿ ಸರಿಯಾದ ಗದ್ಯ ಶೈಲಿಯೇ ಇರಲಿಲ್ಲ. ಎಲಿಜಬೆತ್ ರಾಣಿಯ ಕಾಲದ ವರೆಗೆ ಇಂಗ್ಲಿಷ್ ಭಾಷೆಯಲ್ಲಿ ತಕ್ಕಷ್ಟು ಶಬ್ದಕೋಶವೇ ಇರಲಿಲ್ಲ. ಆಗಿನ ಶೈಲಿ ಬೇಕನ್ನಿನ ಶೈಲಿಯಂತೆ ಗಡುಸಾದ್ದು ಅಥವಾ ಬಹಳ ಅಲಂಕಾರಗಳಿಂದ ಕೂಡಿ ಆಡಂಬರದ ದೊಡ್ಡ ವಾಕ್ಯಗಳಿಂದ ಕೂಡಿದ್ದು. ಕಾದಂಬರಿ, ವಿಜ್ಞಾನ, ಚರಿತ್ರೆ, ತತ್ವಶಾಸ್ತ್ರ, ರಾಜಕೀಯ ಸಂಬಂಧವಾದ ಬರಹಕ್ಕೆ ಅದು ಅನುವಾಗುತ್ತಿರಲಿಲ್ಲ. ಗದ್ಯವನ್ನು ಎಲ್ಲ ಕೆಲಸಕ್ಕೂ ಉಪಯೋಗವಾಗುವಂತೆ ಪ್ರಬಂಧ ಪರಿಷ್ಕರಿಸಿ ಹದಗೊಳಿಸಿತು.

## ೫. ಡೇನಿಯಲ್ ಡಿಫೋ

ಕೌಲಿಯ ಮರಣ 1667ರಲ್ಲಿ. ಹದಿನೆಂಟನೆಯ ಶತಮಾನದ ಸಾಹಿತ್ಯಕ್ಷೇತ್ರದಲ್ಲಿ ಪ್ರಬಂಧದ ಸ್ಥಾನ ಪ್ರಭಾವಗಳು ಬಹಳ ಬೆಳೆದುವು. ವರ್ತಮಾನ ಪತ್ರಿಕೆಗಳು ಅಭಿವೃದ್ಧಿ ಹೊಂದಿದುವು; ಜನಸಾಮಾನ್ಯಕ್ಕೆ ಜ್ಞಾನ, ಸಂಸ್ಕೃತಿ, ನಡೆನುಡಿಗಳ ನಯ, ಜೀವನದ ಸರಳತೆ ಮುಂತಾದುವನ್ನು ತಿಳಿಸುವ ಕಾರ್ಯ ಅಗತ್ಯವಾಯಿತು; ಆದ್ದರಿಂದ ಪ್ರಬಂಧ ಕೇವಲ ಕವಿಯ ಆತ್ಮಕಥೆಯನ್ನು ಹೇಳುವ ಕೆಲಸವನ್ನು ಬದಿಗೊತ್ತಿ ಸಮಾಜ ಪರಿಷ್ಕರಣವನ್ನು ಮಾಡತೊಡಗಿತು. ಆ ಕಾಲದ ಅನೇಕರ ಪ್ರಬಂಧಗಳಲ್ಲಿ ನೀತಿನಿರೂಪಣೆ ಮುಚ್ಚುಮರೆಯಿಲ್ಲದೆ ಎದ್ದು ಕಾಣುವುದು. ಆದರೂ ಈ ಮಧ್ಯೆ ರಿಚರ್ಡ್ ಸ್ಟೀಲಿನಂತೆ ಒಬ್ಬಿಬ್ಬರು ಲಲಿತಪ್ರಬಂಧ ರೀತಿಯನ್ನು ಹರಡಿದರು. ಪತ್ರಿಕೆಗಳಲ್ಲಿ ವೃತ್ತಾಂತಕ್ಕೆ ಹೆಚ್ಚು ಪ್ರಾಧಾನ್ಯ-ಪ್ರಬಂಧಕ್ಕಲ್ಲ. ಸಂಭಾಷಣೆಯ ಶೈಲಿಯಲ್ಲಿ ಪ್ರಬಂಧವನ್ನು ಮೊದಲು ಬರೆದವರಲ್ಲಿ "ರಾಬಿನ್ಸನ್ ಕ್ರೂಸೊ" ಎಂಬ ಪ್ರಸಿದ್ಧ ಕಥೆಯನ್ನು ಬರೆದ ಡೇನಿಯಲ್ ಡಿಫೋ ಒಬ್ಬನು. ಅವನ ಪ್ರಬಂಧಗಳಲ್ಲಿ ಉತ್ತಮವೆನಿಸಿದ ಒಂದರಿಂದ ಇಲ್ಲಿ ಮುಖ್ಯಭಾಗವನ್ನು ಕೊಟ್ಟಿದೆ. ಡ್ಯೂಕ್ ಆಫ್ ಮಾರಲ್ ಬರೋವಿನ ಅಂತ್ಯಕರ್ಮ ನಡೆಯುವಾಗ ಬರೆದ ಪ್ರಬಂಧ ಇದು.

### ಮಾನವನ ಕೀರ್ತಿಯ ನಶ್ವರತೆ

ನಾನು ಈಚೆಗೆ ಚರಿತ್ರೆಯ ವ್ಯಾಸಂಗವನ್ನು ಬಹುವಾಗಿ ಹಚ್ಚಿ

ಕೊಂಡಿದ್ದೇನೆ. ಹಿಂದಿನಕಾಲದ ಮಹಾಪುರುಷರ ಜೀವನಕತೆಗಳನ್ನು ಓದುತ್ತಿದ್ದೇನೆ. ಮಹಾವೀರರಾದ ಅಲೆಕ್ಸಾಂಡರ್, ಜೂಲಿಯಸ್ ಸೀಸರ್, ಮಹಾಪುರುಷನಾದ ಅಗಸ್ಟಸ್ ಮತ್ತು ಇನ್ನು ಅನೇಕರಿಂದ ಇಡಿದು, ಅವರಿಗಿಂತ ದೊಡ್ಡವನಾದ ಹದಿನಾಲ್ಕನೆಯ ಲೂಯಿ, ಎಲ್ಲರಿಗಿಂತ ದೊಡ್ಡವನಾದ ಮಾರೆಲ್ ಬರೋವಿನ ಡ್ಯೂಕ್–ಇಲ್ಲಿಯವರೆಗೂ ಬಂದಿದ್ದೇನೆ. ಮಾರ್ಗದಲ್ಲಿ ನಾನು ಕಂಡವರು ಸಿಥಿಯದ ಟೇಮರ್ ಲೇನ್, ಈಜಿಪ್ಟಿನ ಕುಮಾನ್ ಬೇಗ್, ಮಹಾವೈಭವದ ಸುಲೇಮಾನ್. ಮಹಮ್ಮದೀಯ ಅಥವಾ ಒಟ್ಟೋಮನ್ ಕುಲಕ್ಕೆ ಸೇರಿದ ಇತರರು, ಅವರು ಮಾಡಿರವ ಮಹತ್ಕಾರ್ಯಗಳ ವರದಿಯಾದ ಮೇಲೆ, ಅವರೆಲ್ಲರ ಕತೆಯಲ್ಲಿಯೂ ನಾನು ಓದಿದ್ದು: “ಆಮೇಲೆ ಅವನು ಮಡಿದನು.” ಎಲ್ಲರೂ ಮಡಿವರು, ಮಡಿದರು, ಮಡಿದರು! ಅವರ ಕತೆಯ ಕೊನೆಯಲ್ಲೆಲ್ಲ ಒಂದೇ ವಾಕ್ಯ: **ಇಲ್ಲಿ ಸತ್ತು ಮಲಗಿದ್ದಾನೆ.**

ಎಷ್ಟು ಲಕ್ಷ ವೀರಾಗ್ರೇಸರರು ಕುಪ್ಪೆಕುಪ್ಪೆಯಾಗಿ ನೆಲದಲ್ಲಿ ಅಡಗಿ ಹೋಗಿದ್ದಾರೆ! ಈಗಲೂ ಅವರ ಎಲುಬುಗಳನ್ನು ರೈತರು ಉತ್ತು ಎತ್ತಿ ಹಾಕುತ್ತಿದ್ದಾರೆ, ಕೂಲಿಯವರು ಅವನ್ನು ಅಗೆದು ಹೊರ ಹಾಕುತ್ತಿದ್ದಾರೆ! ಅವರ ಉತ್ತಮಾಂಗಗಳು ಮಣ್ಣಿನಲ್ಲಿ ಸೇರಿಹೋಗಿ ಆ ಮಣ್ಣು ಈಗ ಅತಿ ತುಚ್ಛವಾದ ಕೆಲಸಗಳಿಗೆಲ್ಲಾ ಉಪಯೋವಾಗುತ್ತಿದೆ.

..... ..... ..... ..... ..... ..... .....

ದೊಡ್ಡ ವ್ಯಕ್ತಿಗಳಂತೆಯೇ ದೀರ್ಘಾಯುಗಳೂ ಪ್ರಳಯಕ್ಕಿಂತ ಹಿಂದಿನಕಾಲದ ಮೆಥುಸಲೆಮ್ಮರು—ಆವರ ಚರಿತ್ರೆಗಳಲ್ಲೂ ಕೂಡ ಇದೇ ಮುಕ್ತಾಯವೇ. ಮೆಥುಸಲೆಂ ಒಂಭೈನೂರ ಅರವತ್ತೊಂಭತ್ತು ವರ್ಷ ಬದುಕಿ ಬಾಳಿ, ಗಂಡುಮಕ್ಕಳನ್ನೂ ಹೆಣ್ಣು ಮಕ್ಕಳನ್ನೂ ಪಡೆದ. ಆಮೇಲೆ ಏನಾಯಿತು? ಆಮೇಲೆ ಅವನು ಸತ್ತನು.

ನಾವು ಈಗ ಮಹಾವೀರನಾದ ಮಾರಲ್ ಬರೋವಿನ ಅಂತ್ಯಕರ್ಮ ಗಳನ್ನು ನಡೆಸುತ್ತಿದ್ದೇವೆ. ಅವನ ಎಲ್ಲ ಜಯ, ಎಲ್ಲ ಯಶಸ್ಸು, ಘನ ವಾದ ಯುದ್ಧಾಲೋಚನೆ, ಅವಿಚ್ಛಿನ್ನವಾಗಿ ಅವನಿಗೆ ದೊರೆತ ಗೆಲುವು— ಒಬ್ಬನೇ ಕಾದಾಡಿ, ಅವನ ತೋಳ ಬಲದಿಂದಲೇ ಸಂಪಾದಿಸಿದುದೆಂದೂ ಅವನೆದೇ ಎಂದೂ ಹೇಳುತ್ತಿದ್ದ, ಆದರೆ ಅನೇಕರು ತಮ್ಮ ರಕ್ತವನ್ನು ಸುರಿದು ಹೊಂದಿಸಿಕೊಟ್ಟ ಅವನ ವಿಜಯ—ಎಲ್ಲವೂ ಕೊನೆಗೊಂಡಿವೆ. ಅವರಿವರೇ ಅಲ್ಲ, ಎಲ್ಲ ನರರೂ ಕೊನೆಗಂಡಂತೆಯೆ, ಅವನೂ ಸತ್ತಿರು ವನು.

ಈ ಮಹಾಪುರುಷನದೆಂದು ನಾವು ಟೀಕೆಮಾಡಲು ನಮಗೆ ಉಳಿ ದಿರುವುದು ಅವನ ಸಮಾಧಿ ಮತ್ತು ಚರಿತ್ರೆಮಾತ್ರ. ಅಳಿದ ವಸ್ತುಗಳ ಲೆಕ್ಕದಲ್ಲಿ ಈಗ ಅವನೂ ಒಬ್ಬ. ಅವನ ಅಂತ್ಯಕರ್ಮಗಳೂ ಯುದ್ಧ ಗಳೂ ಶಿಲ್ಪಕಲೆಯ ಮೂಲಕ ಸಂತೋಷಜನಕವೂ ಮನೋಹರವೂ ಆದ ಇತರ ವಸ್ತುಗಳಂತೆ ಅವೂ ನಮ್ಮ ಮನೆಗಳಲ್ಲಿ ಅಲಂಕಾರವಾಗಿ ಪರಿಣಮಿಸುವುವು. ಮನುಷ್ಯನ ಕೀರ್ತಿಯ ಕೊನೆ ಇಷ್ಟೆ. ಈ ಪ್ರಪಂಚಕ್ಕೆ ಬರುವ ಮಹಾಪುರುಷರಿಗೂ ಅವರು ಸಾಧಿಸುವ ಉತ್ತಮ ಸಾಹಸ ಕಾರ್ಯಕ್ಕೂ ಜನ ಕೊಡುವುದು ಇಷ್ಟು ಅಲ್ಪ ಪ್ರತಿಫಲ ಮಾತ್ರವೇ.

---

## ೬. ರಿಚರ್ಡ್ ಸ್ಟೀಲ್

ಡೇನಿಯಲ್ ಡಿಫೋವಿನ ಈ "ಲಿಟಲ್ ರಿವ್ಯೂ" ಪ್ರಬಂಧ ಗಳಿಂದ ಸೂಚನೆಯನ್ನು ತೆಗೆದುಕೊಂಡು ರಿಚರ್ಡ್ ಸ್ಟೀಲ್, "ಟ್ಯಾಟ್ಲರ್" ಎಂಬ ವರ್ತಮಾನ ಪತ್ರಿಕೆಯನ್ನು ಆರಂಭಿಸಿ ದನು. ಅದುವರೆಗೆ ಆವನು ಸಾಹಿತ್ಯಕ್ಷೇತ್ರದಲ್ಲಿ ಸ್ವಲ್ಪಮಟ್ಟಿಗೆ ಕೆಲಸಮಾಡಿದ್ದರೂ ಲಲಿತಪ್ರಬಂಧದ ಸ್ವರೂಪವು ಅವನಿಗೆ

ಗೋಚರವಾದದ್ದು ಡಿಫೋವಿನ ಪ್ರಬಂಧಗಳಿಂದ. ಟ್ಯಾಟ್ಲರ್ ಪತ್ರಿಕೆಯ ಆಶಯವನ್ನು ಅವನು ಹೀಗೆ ವರ್ಣಿಸಿರುವನು. "ಈ ಪತ್ರಿಕೆಯ ಮುಖ್ಯಗುರಿ, ಜೀವನದ ಕೃತಕ ಅಂಶಗಳನ್ನು ಬಹಿರಂಗ ಮಾಡುವುದು; ಮೋಸ, ಒಣಜಂಭ, ನಟನೆಗಳ ಮುಸುಕುಗಳನ್ನು ಕಿತ್ತೆಸೆಯುವುದು; ಉಡುಪು, ನಡೆ, ನುಡಿಗಳಲ್ಲಿ ಸಾಮಾನ್ಯವಾದ ಸರಳತೆಯನ್ನು ಬೆಳೆಸುವುದು." ಸ್ಟೀಲಿನ ಅಂತಃಕರಣ ಪ್ರಬಂಧಕ್ಕೆ ಸರಿಯಾದ ಹದವನ್ನು ಹೊಂದಿದ್ದಿತು. ಅವನಿಗೆ ಕಾರಣಾಂತರದಿಂದ ಪತ್ರಿಕೆಯಲ್ಲಿ ಬರೆಯುವಷ್ಟು ವರ್ತಮಾನ ಸಿಕ್ಕದೆಹೋಗಲು ಪತ್ರಿಕೆ ನಿಲ್ಲುವ ಸ್ಥಿತಿ ಒದಗಿತು. ಆ ಸಂದರ್ಭದಲ್ಲಿ ಹಳೆಯ ಸ್ನೇಹಿತನೊಬ್ಬನ ಸಂಪರ್ಕ ಅವನಿಗುಂಟಾಯಿತು. ಜೋಸೆಫ್ ಅಡಿಸನ್ ಎಂಬ ಕವಿ ತನ್ನೊಳಗೆ ಹುದುಗಿದ್ದ ವಿಚಾರ ಸಂಪತ್ತನ್ನು ಹೊರಗೆಡಹಲು ಸರಿಯಾದ ಸಾಹಿತ್ಯ ರೂಪವನ್ನೇ ಕಂಡಿರಲಿಲ್ಲ. ತನ್ನ ಒಡನಾಡಿಯೂ ಸಹಪಾಠಿಯೂ ಆದ ಸ್ಟೀಲಿನ ಪ್ರಬಂಧಗಳನ್ನೋದಿ ಅವನು ಸಂತೋಷಪಟ್ಟು ತನ್ನ ಆತ್ಮವಿಕಾಸಕ್ಕೆ ತಕ್ಕ ಸಾಹಿತ್ಯಪ್ರಭೇದವು ಪ್ರಬಂಧವೆಂದು ತಿಳಿದುಕೊಂಡನು. "ಟ್ಯಾಟ್ಲರ್" ನಿಂತುಹೋಯಿತು; ಆದರೇನು, ಅದಕ್ಕಿಂತಲೂ ಮಧುರವಾದ "ಸ್ಪೆಕ್ಟೇಟರ್" ಪತ್ರಿಕೆ ಆರಂಭವಾಯಿತು. ಈ ಪತ್ರಿಕೆಯಲ್ಲಿ ಸ್ಟೀಲ್ ಸಹ ಪ್ರಬಂಧಗಳನ್ನು ಬರೆಯುತ್ತಿದ್ದನು. ಇಬ್ಬರ ಗುರಿಯೂ ಒಂದೇ ಆದರೂ, ಒಂದೇ ಸಾಹಿತ್ಯ ಕ್ರಮವನ್ನು ಇಬ್ಬರೂ ಉಪಯೋಗಿಸಿದರೂ ಅವರ ಶೈಲಿಗಳಲ್ಲಿ ವ್ಯತ್ಯಾಸವುಂಟು. ಅವರಿಬ್ಬರ ಅನುಭವಸಂಪತ್ತೂ ಆಲೋಚನಾ ಸಂಪತ್ತೂ ಆಧ್ಯಾತ್ಮಿಕ ಸಂಪತ್ತೂ ಬೇರೆ ಬೇರೆ

ಆಗಿದ್ದುದರಿಂದ ಅವರ ಶೈಲಿಯೂ ಜೀವನ ವಿಮರ್ಶೆಯೂ ಬೇರೆ ಬೇರೆಯಾಗಿದೆ.

ರಿಚರ್ಡ್ ಸ್ಟೀಲಿನ ಒಂದು ಪ್ರಬಂಧದ ಮುಖ್ಯ ಭಾಗ ವಿದು :

## ಬಾಲ್ಯದ ನೆನಪು

ನನಗೆ ತಿಳಿದಂತೆ ದುಃಖ ಮೊದಲ ಬಾರಿ ನನಗೆ ಉಂಟಾದ್ದು ನನ್ನ ತಂದೆ ಸತ್ತಾಗ. ಆಗ ನನಗಿನ್ನೂ ಐದು ವರ್ಷ ತುಂಬಿರಲಿಲ್ಲ. ಮನೆಯಲ್ಲಿ ಈ ಗಲಾಟೆ ಏಕೆಂದು ಆಶ್ಚರ್ಯಪಟ್ಟೆ. ನನ್ನ ಸಂಗಡ ಆಡಲು ಏತಕ್ಕೆ ಯಾರೂ ಸೇರಲಿಲ್ಲವೆಂದು ನನಗೆ ತಿಳಿಯಲಿಲ್ಲ. ಅವನ ಕಳೇಬರವನ್ನು ಮಲಗಿಸಿದ್ದ ಕೋಣೆಗೆ ನಾನು ಹೋದಂತೆ ಸ್ವಲ್ಪ ನೆನಪು. ಅಮ್ಮ ಒಬ್ಬಳೇ ಅಲ್ಲಿ ಅಳುತ್ತ ಕುಳಿತಿದ್ದಳು. ನನ್ನ ಕೈಯಲ್ಲಿ ಒಂದು ಆಟದ ದಾಂಡು ಇತ್ತು. ಶವದ ಪೆಟ್ಟಿಗೆಯನ್ನು ದಾಂಡಿನಿಂದ ಬಡಿದು ಅಪ್ಪ ನನ್ನು ಕೂಗಿದೆ. ಅವನನ್ನು ಆ ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿದ್ದರೆಂಬ ಭಾವನೆ ಸ್ವಲ್ಪವಿದ್ದಿತು: ಅದು ಹೇಗೆ ಹುಟ್ಟಿಬಂದಿತೋ ತಿಳಿಯದು. ಅಮ್ಮ ನನ್ನನ್ನು ಎತ್ತಿಕೊಂಡು ತನಗಿದ್ದ ಮಹಾವ್ಯಸನವನ್ನು ಕೊಂಚ ನುಂಗಿಕೊಂಡಳು. ನನ್ನ ಉಸಿರು ಕಟ್ಟುವಷ್ಟು ಬಲವಾಗಿ ನನ್ನನ್ನು ಅಪ್ಪಿ ಕೊಂಡಳು ಮತ್ತು ಕಣ್ಣೀರು ಸುರಿಸುತ್ತ ಹೇಳಿದಳು :

"ಅಪ್ಪನಿಗೆ ನಿನ್ನ ಮಾತು ಕೇಳುವುದಿಲ್ಲ. ಅವನು ನಿನ್ನ ಸಂಗಡ ಇನ್ನು ಆಡುವುದಿಲ್ಲ. ಅವನನ್ನು ನೆಲದೊಳಗೆ ಮಲಗಿಸುವರು. ಅಲ್ಲಿಂದ ಪುನಃ ನಮ್ಮಲ್ಲಿಗೆ ಅವನು ಬರುವುದಿಲ್ಲ." ಅವಳು ಬಹು ರೂಪವತಿ. ಅವಳ ಜೀವ ಘನವಾದುದು. ಭಾವಾವೇಶದಲ್ಲಿಯೂ ಸಂಕಟದಲ್ಲಿಯೂ ಅವಳ ವರ್ತನೆ ಗಂಭೀರವಾಗಿದ್ದಿತು. ಅದು ನನ್ನಲ್ಲಿ ನೈಜವಾದ ಅಳುವ ನ್ನುಂಟುಮಾಡಿತು ಎಂದು ನನ್ನ ಭಾವನೆ. ಯಾತಕ್ಕೋಸ್ಕರ ನಾನು ದುಃಖಪಡುತ್ತಿದ್ದೇನೆ ಎನ್ನುವುದು ತಿಳಿಯುವ ಮೊದಲೇ ದುಃಖ ನನ್ನ ಆತ್ಮವನ್ನು ಆವರಿಸಿತು. ಆ ದಿನದಿಂದ ನನ್ನ ಹೃದಯ ಕರುಣೆಯೆನ್ನುವ ದೌರ್ಬಲ್ಯಕ್ಕೀಡಾಯಿತು. ಎಳೆಯ ಮಕ್ಕಳ ಮನಸ್ಸು ಗರ್ಭದಲ್ಲಿರುವ ಭ್ರೂಣದಂತೆ. ಆಗ ಅಂತರ್ಯದ ಮೇಲೆ ಬಲವಾದ ಮುದ್ರೆಬಿದ್ದರೆ,

ಆಮೇಲೆ ಬುದ್ಧಿಯ ಯಾವ ಪ್ರಯತ್ನವೂ ಅದನ್ನು ಅಳಿಸಲಾರದು. ಮಗುವು ಹುಟ್ಟುವಾಗ ಶರೀರದಲ್ಲಿ ಯಾವುದಾದರೂ ಮಚ್ಚೆಯಿದ್ದರೆ ಅದನ್ನು ಆಮೇಲೆ ಯಾವ ಪ್ರಯೋಗದಿಂದಲೂ ಹೋಗಲಾಡಿಸುವುದು ಹೇಗೆ ಅಸಾಧ್ಯವೋ ಹಾಗೆ. ಆದುದರಿಂದ ನನ್ನ ಒಳ್ಳೆಯ ಸ್ವಭಾವ ನನ್ನಲ್ಲಿ ಒಂದು ದೊಡ್ಡತನವಲ್ಲ. ಶೋಕಕ್ಕೆ ಕಾರಣವುಂಟೆಂಬ ಅರಿವು ಇಲ್ಲದಿರುವಾಗ, ಬುದ್ಧಿವಾದಗಳ ಸಹಾಯದಿಂದ ಸಮಾಧಾನಹೊಂದು ವುದನ್ನು ಕಲಿಯುವ ಮೊದಲು, ತಾಯಿಯ ಕಣ್ಣೀರಿನ ಹೊಳೆಯಲ್ಲಿ ಆಗಿಂದಾಗ ಮಿಂದುದರಿಂದ ನನ್ನಲ್ಲಿ ಕರುಣೆ, ಪಶ್ಚಾತ್ತಾಪ, ಗಂಡಸಿಗೆ ಒಪ್ಪದಂಥಾ ಅತಿ ಕೋಮಲ ಚಿತ್ತವೃತ್ತಿ—ಇವು ತುಂಬಿಕೊಂಡುವು. ಅವು ನನ್ನನ್ನು ಹತ್ತುಸಾವಿರ ತೊಂದರೆಗಳ ಬಲೆಗೆ ಸಿಕ್ಕಿಸಿವೆ. ಅವು ಗಳಿಂದ ನನಗೆ ಎಳ್ಳಷ್ಟೂ ಪ್ರಯೋಜನವಿಲ್ಲ. ಆದರೆ ಆ ಮನೋಧರ್ಮ ದಲ್ಲಿರುವಾಗ ಮಾತ್ರ ದಯಾರಸದ ಮೃದುತ್ವದಿಂದ ಸಂತೋಷಹೊಂದ ಬಲ್ಲೆ. ಕಳೆದುಹೋದ ಸಂಕಟಗಳ ನೆನಪಿನಿಂದಬರುವ ಒಂದು ಬಗೆಯ ವ್ಯಾಕುಲದ ಸೌಖ್ಯವನ್ನು ಅನುಭವಿಸಬಲ್ಲೆ.

ಹೀಗೆ ಕರುಣಾಮಯವಾದ ಒಂದು ಜೀವ ಸಮಾಜದ ಉನ್ನತಿಗೆ ಸಾಹಿತ್ಯಕ್ಷೇತ್ರದಲ್ಲಿ ಕೆಲಸ ಮಾಡಿದರೆ ಒಳ್ಳೆಯ ಸಾಹಿತ್ಯವಲ್ಲದೆ ಮತ್ತೇನು ಬಂದೀತು? "ಅಪಹಾಸ್ಯ"ದ ವಿಚಾರವಾಗಿ ಸ್ಟೀಲ್ ಬರೆದ ಪ್ರಬಂಧದ ಈ ಕೆಲವು ಭಾಗ ಗಳನ್ನು ನೋಡಿ:

ಈ ದಿನ ಒಬ್ಬಾತ ತನ್ನ ಸ್ನೇಹಿತನನ್ನು ಕುರಿತು ಮೆಚ್ಚಿಕೆಯ ಈ ಮಾತನ್ನಾಡುತ್ತಿದ್ದುದನ್ನು ಕೇಳಿ ನನಗೆ ಅಸಮಾಧಾನವಾಯಿತು: 'ನೋಡು, ಚುಚ್ಚುವ ಮಾತನ್ನು ಟಾಮ್ ಹೇಳದೆ ಇರಲಾರ; ಅವನಿಗೆ ಮಾತಿನ ಚಾತುರ್ಯ ವಿಶೇಷವಾಗಿದೆ; ಆದರೆ ವಿಡಂಬನ ಅವನ ಮುಖ್ಯ ವೈಶಿಷ್ಟ್ಯ. ಅವನ ಸಂಗಡ ವಾದಮಾಡಲು ಧೈರ್ಯಮಾಡಿದ ಆ ಯುವ ಕನ ಮುಖವನ್ನು ಅವನು ಹೇಗೆ ಮುರಿದ ನೋಡು' ಈ ಬಗೆಯ ಅಪ್ರಾಸಂಗಿಕವಾದ ಮೆಚ್ಚುಗೆಯನ್ನು ದಿನದಿನವೂ ನಾನು ನೋಡಿದಾಗ ನಿಜವಾದ ಹಾಸ್ಯ ವಿಡಂಬನಗಳೆಂದರೇನು ಎಂಬ ಯೋಚನೆ ಮೂಡು ತ್ತದೆ. ವಿಡಂಬನಶಕ್ತಿಯನ್ನು ಅಧಿಕವಾಗಿ ಪಡೆದಿರುವ ಕೆಲವರನ್ನು ಜನ

ಮೆಚ್ಚಿರುವರು. ಆ ಮಹಾವ್ಯಕ್ತಿಗಳನ್ನು ಕುರಿತು ಆಲೋಚನೆ ಮಾಡಿದ ಮೇಲೆ ಶುದ್ಧ ಹಾಸ್ಯ ಮತ್ತು ವಿಡಂಬನಗಳ ಲಕ್ಷಣ ನನಗೆ ಗೋಚರ ವಾಯಿತು. ಆ ಕೆಲವು ವ್ಯಕ್ತಿಗಳನ್ನು ಮನಸ್ಸಿನಲ್ಲಿ ಪರೀಕ್ಷಿಸಿದ ಮೇಲೆ ಒಂದುತೀರ್ಮಾನಕ್ಕೆಬಂದೆ. ಮೊದಲಲ್ಲಿ ಎಷ್ಟುಅಸಂಬದ್ಧವಾಗಿ ಕಂಡರೂ ವಿಡಂಬನಕಾರನಲ್ಲಿ ಇರಬೇಕಾದ ಬಹಳ ಮುಖ್ಯವಾದ ಗುಣ ಒಳ್ಳೆಯ ಸ್ವಭಾವ. ಈ ವಿಧವಾದ ಬರೆವಣಿಗೆಯಲ್ಲಿರುವ ಸುಂದರ ಭಾವಗಳೆಲ್ಲ ಗ್ರಂಥಕರ್ತನ ಆ ಗುಣದಿಂದಲೇ ಹುಟ್ಟಿಹೊರಹೊಮ್ಮಬೇಕು. ಒಳ್ಳೆಯ ಸ್ವಭಾವದಿಂದ ಮನುಷ್ಯರ ನೀಚತನ, ದುರ್ಗುಣ ಮತ್ತು ಅವಿವೇಕಗಳಲ್ಲಿ ತಿರಸ್ಕಾರವು ಹುಟ್ಟುತ್ತದೆ. ತಪ್ಪನ್ನು ಕಂಡು ತೀವ್ರವಾದ ವಿಮರ್ಶೆ ಮಾಡುವಂತೆ ಅದು ಪ್ರೇರಿಸುವುದೇ ವಿನಾ ವ್ಯಕ್ತಿಗಳನ್ನು ಕಂಡರೆ ಅದಕ್ಕೆ ಯಾವ ಕಾಠಿಣ್ಯವೂ ಇರುವುದಿಲ್ಲ. ಒಳ್ಳೆಯ ಸ್ವಭಾವ ಮನಸ್ಸನ್ನುಶಾಂತ ವಾಗಿಡುವುದು; ಅದು ಯಾವೊಬ್ಬನನ್ನೂ ಅನುಚಿತವಾದ ಅಪಮಾನಕ್ಕೆ ಗುರಿಮಾಡಿ ಅವನನ್ನು ಕೆಟ್ಟವನೆಂದು ದೂಷಿಸಲು ಸಮ್ಮತಿಸುವುದಿಲ್ಲ. ಯಾರು ಬೇವಿಯಸ್ಸನ್ನು ದ್ವೇಷಿಸುವುದಿಲ್ಲವೋ ಅವನು ಮೇವಿಯಸ್ಸನ್ನು ಪ್ರೀತಿಸಬಹುದು' ಎಂಬ ವರ್ಜಿಲ್‌ನ ಹೇಳಿಕೆ ಸಂಪೂರ್ಣವಾಗಿ ಹಾಸ್ಯ ದಿಂದ ಕೂಡಿದ್ದು. ದಡ್ಡರ ಅವಿವೇಕವನ್ನು ಕಂಡು ಅವನಿಗೆ ತೀವ್ರ ಭಾವೋದ್ರೇಕವಾಗಲು ಕಾರಣವಿರಲಿಲ್ಲ. ಆವೇಶದಲ್ಲಿ ಅವರನ್ನು ಮೂರ್ಖರೆಂದಾಗಲೀ ನೇರವಾದ ಕಟೂಕ್ತಿಯಿಂದ ಮಂಕರೆಂದಾಗಲೀ ಅವನು ಹೇಳಲಿಲ್ಲ. ಕೋಪದ ಮಿಶ್ರಣ ಸ್ವಲ್ಪವೂ ಇಲ್ಲದೆ ನಯವಾದ ತಿರಸ್ಕಾರದಿಂದ ಅವರನ್ನು ನೋಡಿ ನಕ್ಕನು.

. . . . . . . . . . . . . . . . . . .

ಈ ನಗರದಲ್ಲಿ ಕೆಲವು ಜಂಬಗಾರರು ವಿಡಂಬನಚತುರರೆಂಬ ಹೆಸರ ನ್ನಿಟ್ಟುಕೊಂಡು ಓಡಾಡುತ್ತಿದ್ದಾರೆ. ಅವರಿಗೆ ನಾನು ಖಂಡಿತವಾಗಿಹೇಳು ತ್ತೇನೆ: ವಿಡಂಬನಕಾರರೆನ್ನಿಸಿಕೊಳ್ಳಲು ಬೇಕಾದ ಯಾವ ರೀತಿಯ ಯೋಗ್ಯತೆಯೂ ಅವರಿಗೆ ಇಲ್ಲ. ಏಕೆಂದರೆ ಆ ಕೆಲಸಕ್ಕೆ ಮುಖ್ಯವಾಗಿ ಬೇಕಾಗಿರುವುದು ಒಳ್ಳೆಯ ಸ್ವಭಾವ; ಒಳ್ಳೆಯ ಸ್ವಭಾವವಿಲ್ಲದೆ ಅವರು ಹೊಗಳಿದರೂ ಒಂದೇ, ಅಪಹಾಸ್ಯ ಮಾಡಿದರೂ ಒಂದೇ.

ಯಾವ ಮಾನುಷ್ಯನ ಒಳ್ಳೆಯ ಸ್ವಭಾವದ ವಿಚಾರದಲ್ಲಿ ಸಂದೇಹ ವುಂಟೋ ಅವನು ವಿಡಂಬನಬರಹದಲ್ಲಿ ವಾಕ್ಸಿದ್ಧಿಯನ್ನು ಪಡೆಯಲಾರ. ನಿಮ್ಮ ಬರಹ ವೈಯಕ್ತಿಕ ಜಗಳವನ್ನು ಕುರಿತದ್ದಾದುದರಿಂದ ಜನರು ಓದುವವರೆಂದು ಭಾವಿಸುವುದು ಶುಷ್ಕಪ್ರತಿಷ್ಠೆಯೇ ಸರಿ. ನಿಮ್ಮ ವಿಡಂಬನವನ್ನು ಯಾರಾದರೂ ಲಕ್ಷಿಸಬೇಕಾದರೆ ನೀವು ಸಮಾಜವನ್ನು ಕುರಿತು ವಿಡಂಬನಮಾಡಬೇಕು. ಹಾಗೆ ಮಾಡಿದಾಗ, ಚತುರವಾಗ್ಮಿಯ ಒಳ್ಳೆಯ ಸ್ವಭಾವ ಚುರುಕಾದ ಮತ್ತು ಅಪಹಾಸ್ಯದಿಂದ ತುಂಬಿದ ಭಾವಗಳನ್ನೂ ಉತ್ತರಗಳನ್ನೂ ಹೇಳುವಂತೆ ಪ್ರೇರಿಸುತ್ತದೆ; ಪ್ರಪಂಚದಲ್ಲಿರುವ ದುರ್ಬುದ್ಧಿಯನ್ನೆಲ್ಲಾ ಒಟ್ಟುಗೂಡಿಸಿದರೂ ಅವನ ಬಾಯಿ ಮುಚ್ಚಿಸುವ ಉತ್ತರವನ್ನು ಕೊಡಲು ಆಗುವುದಿಲ್ಲ.

## ೭. ಜೋಸೆಫ್ ಅಡಿಸನ್

ರಿಚರ್ಡ್ ಸ್ಟೀಲಿನಿಂದ ಪ್ರಬಂಧದ ಜೀವಾಳವನ್ನು ಕಂಡುಕೊಂಡು ನೂರಾರು ಪ್ರಬಂಧಗಳನ್ನು ಬರೆದ ಜೋಸೆಫ್ ಅಡಿಸನ್ನಿನಲ್ಲಿ ಮೇಲೆ ಹೇಳಿರುವ ಒಳ್ಳೆಯ ಸ್ವಭಾವವಿತ್ತು. ಸಮಾಜದ ಲೋಪದೋಷಗಳನ್ನು ಹೊರಗೆಡಹುವುದರಲ್ಲಿ, ಒಳ್ಳೆಯ ನೀತಿಯನ್ನು ಉಪದೇಶಿಸುವುದರಲ್ಲಿ ಅವನು ಉಪಯೋಗಿಸಿದ ಹಾಸ್ಯ ಸಂಭಾವಿತನ ಹಾಸ್ಯ: ಅವನ ಯಾವ ಒಂದು ಲೇಖನವೂ ಯಾರೊಬ್ಬರ ಮನಸ್ಸನ್ನೂ ನೋಯಿಸಲಿಲ್ಲವೆನ್ನುವುದು ಅವನ ಕೀರ್ತಿಯ ಕುರುಹು. ಅವನ ಪ್ರಬಂಧ ಪ್ರಕಟವಾಗುತ್ತಿದ್ದುದು "ಸ್ಪೆಕ್ಟೇಟರ್" ಪತ್ರಿಕೆಯಲ್ಲಿ. ಅದರ ಆಶಯವನ್ನು ವಿವರಿಸುವ ಪ್ರಬಂಧದಲ್ಲಿ ಅವನು ಹೀಗೆ ಹೇಳುವನು :

ಈ ದೊಡ್ಡ ನಗರದ ಜನ ನನ್ನ ಈ ಪತ್ರಿಕೆಯನ್ನು ದಿನದಿನವೂ ಅಪೇಕ್ಷಿಸುವರೆಂದೂ ನನ್ನ ಈ ಬೆಳಗಿನ ಭಾಷಣವನ್ನು ಬಹಳ ಔತ್ಸುಕ್ಯದಿಂದಲೂ ಸೌಜನ್ಯದಿಂದಲೂ ಸ್ವೀಕರಿಸುವರೆಂದೂ ಕೇಳಿ ನನಗೆ ಸಂತೋ

ಷವಾಯಿತು. ದಿನವೂ ಮೂರು ಸಾವಿರ ಪ್ರತಿಗಳನ್ನು ಹಂಚುವುದಾಗಿ ನಮ್ಮ ಪ್ರಕಟನಕಾರನು ತಿಳಿಸಿದ್ದಾನೆ. ಒಂದೊಂದು ಪತ್ರಿಕೆಯನ್ನು ಇಪ್ಪತ್ತು ಮಂದಿ ಓದುವರೆಂದು ಇಟ್ಟುಕೊಂಡರೆ—ಅದೇನೂ ಹೆಚ್ಚಲ್ಲ, ಲಂಡನ್ ಮತ್ತು ವೆಸ್ಟ್‌ಮಿನ್‌ಸ್ಟರುಗಳಲ್ಲಿ ನನಗೆ ಅರವತ್ತು ಸಾವಿರ ಶಿಷ್ಯರಿದ್ದ ಹಾಗಾಯಿತು. ಇವರೆಲ್ಲರೂ ಅಜ್ಞಾನಿಗಳ, ಆಲೋಚನಾಪರರಲ್ಲದವರ ಸಮೂಹದಿಂದ ಬೇರೆಯೆಂದು ನಾನು ನಂಬಿದ್ದೇನೆ. ಇಷ್ಟು ದೊಡ್ಡ ಶ್ರೋತೃವೃಂದವನ್ನುಂಟುಮಾಡಿಕೊಂಡಿರುವುದರಿಂದ ಅವರ ಶಿಕ್ಷಣವು ಹಿತವಾಗುವಂತೆಯೂ ಉಲ್ಲಾಸವು ಉಪಯುಕ್ತವಾಗುವಂತೆಯೂ ಎಸಗಲು ನಾನು ಯಾವ ಬಗೆಯ ಕಷ್ಟಾನುಭವಕ್ಕೂ ಹಿಂಜರಿಯುವುದಿಲ್ಲ. ನೀತಿಯನ್ನು ಮಾತಿನ ಚಮತ್ಕಾರದಿಂದ ಕಾಂತಿಗೊಳಿಸುತ್ತೇನೆ; ಮಾತಿನ ವಿನೋದವನ್ನು ನೀತಿಯಿಂದ ಹದ್ದಿನಲ್ಲಿಡುತ್ತೇನೆ, ಸಾಧ್ಯವಾದರೆ ಈ ಪತ್ರಿಕೆಯನ್ನೋದುವವರು ಎರಡನ್ನೂ ಅನುಭವಿಸಲಿ ಎಂದು. ಜನರಲ್ಲಿ ತಮ್ಮ ಸೌಶೀಲ್ಯದ ವಿಚಾರವಾಗಿ ಆಲೋಚನೆ ಸಾಧಾರಣವಾಗಿ ಆಗಿಂದಾಗ ಮಾತ್ರ ಹುಟ್ಟಿಬರತಕ್ಕದ್ದು; ಅದನ್ನು ನಿತ್ಯವನ್ನಾಗಿ ಮಾಡಿ ಒಳ್ಳೆಯ ಭಾವನೆಗಳನ್ನು ಪ್ರತಿದಿನವೂ ಅವರ ನೆನಪಿಗೆ ತರಬೇಕೆಂದು ದೃಢಸಂಕಲ್ಪ ಮಾಡಿದ್ದೇನೆ. ಈಗಿನ ಸಮಾಜ ಅತಿಯಾದ ದುರ್ಗುಣ ಅವಿವೇಕಗಳಲ್ಲಿ ಸಿಕ್ಕಿಬಿಟ್ಟಿದೆ. ಅಲ್ಲಿಂದ ಒಳ್ಳೆಯ ಮಾರ್ಗಕ್ಕೆ ಅದನ್ನು ಹಿಂದಿರುಗಿಸಲೇಬೇಕು. ಒಂದುದಿನ ಕೃಷಿಮಾಡದೆ ಬಿಟ್ಟರೂ ಮನಸ್ಸು ಹಲವು ಅವಿವೇಕಗಳ ಉತ್ಪತ್ತಿಗೆ ಅವಕಾಶ ಕೊಡುವುದು. ಅವನ್ನು ಕಿತ್ತುಹಾಕಲು ನಿರಂತರವಾದ ಶ್ರದ್ಧೆಯಿಂದ ಕೂಡಿದ ಕೃಷಿ ಆವಶ್ಯಕ. ಸಾಕ್ರೆಟೀಸನ ವಿಚಾರವಾಗಿ ಜನ ಹೇಳಿದರು: ಅವನು ವೇದಾಂತವನ್ನು ಸ್ವರ್ಗದಿಂದ ಭೂಮಿಗೆ ತಂದು ಜನರ ಮಧ್ಯೆ ವಾಸಿಸುವಂತೆ ಮಾಡಿದ ಎಂದು. ನನ್ನ ವಿಚಾರವಾಗಿಯೂ ಜನರು ಹೀಗೆ ಹೇಳಬೇಕೆಂದು ನನ್ನ ಆಸೆ: ವೇದಾಂತವನ್ನು ವ್ಯಾಸಂಗದ ಕೊಠಡಿಗಳಿಂದ, ಪುಸ್ತಕಭಂಡಾರಗಳಿಂದ, ಪಾಠಶಾಲೆಗಳಿಂದ, ವಿಶ್ವವಿದ್ಯಾನಿಲಯಗಳಿಂದ ಹೊರಕ್ಕೆತಂದು ಕ್ಲಬ್ಬುಗಳಲ್ಲಿ, ಸಭೆಗಳಲ್ಲಿ, ಟೀ ಇಡುವ ಮೇಜುಗಳ ಸುತ್ತ ಮತ್ತು ಕಾಫೀ ಮನೆಗಳಲ್ಲಿ ವಾಸಿಸುವಂತೆ ಮಾಡಿದನು.

ಈ ಹೆಗ್ಗುರಿಯನ್ನು ಅಡಿಸನ್ ಕಾರ್ಯತಃ ಸಾಧಿಸಿದನು. ಜನರ ರೀತಿನೀತಿಗಳನ್ನು ನಡೆನುಡಿಗಳನ್ನು ತಿದ್ದಲು

ಅಜ್ಞಾನವನ್ನು ತೊಲಗಿಸಿ ಜ್ಞಾನದಾನ ಮಾಡಲು ಸಂತತ ವಾಗಿ ಪ್ರಯತ್ನಮಾಡಿದನು. ಅವನ ಪ್ರಬಂಧಗಳನ್ನೋದಿದರೆ ತಿಳಿಯುತ್ತದೆ, ಪ್ರಬಂಧದಲ್ಲಿ ಯಾವ ವಿಷಯವನ್ನು ರಮ್ಯ ವಾಗುವ ರೀತಿಯಲ್ಲಿ ಹೇಗೆ ಹೇಳಬಹುದೆಂಬುದು. ಅವನು ಟೀಕಿಸಿದ ಸಮಾಜ ಲಂಡನ್ನಿನ ಜನರದ್ದಲ್ಲ; ಅಥವಾ ಒಂದು ದರ್ಜೆಯ ಜನರದ್ದಲ್ಲ. ಪಟ್ಟಣ, ಹಳ್ಳಿ, ಸಿಪಾಯಿಗಳ ಗುಂಪು, ವರ್ತಕರ ಸಭೆ, ಪಾದ್ರಿಗಳ ಗುಡಿ ಮುಂತಾಗಿ ಎಲ್ಲೆಲ್ಲಿ ಅವನು ಹೋದಾಗ ಯಾವ ಯಾವ ದೋಷ ಅವನ ಕಣ್ಣಿಗೆ ಬಿದ್ದಿತೋ ಅದೆಲ್ಲವನ್ನೂ ಕುರಿತು ಬರೆದಿದ್ದಾನೆ. ಹೆಂಗಸರ ಉಡುಪಿನಲ್ಲಿ ಅಸಭ್ಯವಾದ ಮಾರ್ಪಾಡಾದರೆ ಅದು ಅಡಿಸನ್ನಿನ ದೃಷ್ಟಿಗೆ ಬೀಳದೆ ಹೋಗದು. ಇದರ ಜೊತೆಗೆ ಅವನು ಸಾಹಿತ್ಯ ವಿಮ ರ್ಶೆಯ ಕಾರ್ಯವನ್ನೂ ಮಾಡಿದನು. ಇನ್ನೂ ಹೆಚ್ಚಿನ ಕೆಲಸ ವೆಂದರೆ, ಬಹಳ ಪರಿಣಾಮವನ್ನುಂಟುಮಾಡಿದ ಮೆಚ್ಚಿಗೆಯ ಕೆಲಸವೆಂದರೆ, ಸರ್ ರೋಜರ್ ಡಿ ಕವರ್ಲಿ ಎಂಬ ಕಲ್ಪಿತ ಪಾತ್ರದ ರಚನೆ. ಈ ಜಮೀನುದಾರನ ವಿಚಾರವಾಗಿ ಸುಮಾರು ಮೂವತ್ತೈದು ಪ್ರಬಂಧಗಳಿವೆ. ಹೀಗೆ ಜೀವಂತ ವಾಗಿ ನಿಲ್ಲುವ ಪಾತ್ರರಚನೆಯನ್ನು ಗದ್ಯಸಾಹಿತ್ಯದಲ್ಲಿ ಅದು ವರೆಗೆ ಹೆಚ್ಚಾಗಿ ಮಾಡಿರಲಿಲ್ಲ. ಅಡಿಸನ್ನಿನ ಮಾದರಿ ಅವನ ಅನಂತರ ಬಂದ ಕಾದಂಬರೀಕಾರರಿಗೆ ಮಾರ್ಗದರ್ಶಕ ವಾಯಿತು. ಅಲ್ಲದೆ, ಇಂಗ್ಲಿಷ್ ಗದ್ಯಶೈಲಿಯನ್ನು ಎಲ್ಲ ವಿಧ ದಲ್ಲೂ ಬಳಕೆಗೆ ಬರುವಂತೆ ಹದಮಾಡಿದವನು ಅಡಿಸನ್. ಇವನ ಶೈಲಿಯನ್ನು ಕುರಿತು ಡಾಕ್ಟರ್ ಜಾನ್‌ಸನ್ ಹೇಳಿರುವ ಮಾತು ಗಾದೆಯಾಗಿಬಿಟ್ಟಿದೆ: "ಬಳಕೆಯಲ್ಲಿರುವುದಾದರೂ ಅಶ್ಲೀಲವಲ್ಲದ, ಸುಂದರವಾದರೂ ಆಡಂಬರವಿಲ್ಲದ ಇಂಗ್ಲಿಷ್

ಶೈಲಿಯನ್ನು ಕಲಿಯುವ ಅಪೇಕ್ಷೆಯುಳ್ಳವನು ಹಗಲೂ ರಾತ್ರಿಯೂ ಅಡಿಸನ್ನಿನ ಪುಸ್ತಕಗಳನ್ನು ಓದಬೇಕು." ಈ ಕೆಳಗೆ ಕೊಡುವ ಪ್ರಬಂಧ ಭಾಗವು ಅಡಿಸನ್ನಿನ ರೀತಿಯನ್ನು ಚೆನ್ನಾಗಿ ತಿಳಿಸುವುದು.

## ದೇವಾಲಯದಲ್ಲಿ ಸರ್ ರೋಜರ್

ನನ್ನ ಸ್ನೇಹಿತ ಸರ್ ರೋಜರ್ ಮತದಲ್ಲಿ ಅತಿಶ್ರದ್ಧೆಯುಳ್ಳವನು. ಬೈಬಲ್ಲಿನಿಂದ ಹಲವು ನೀತಿಯ ವಾಕ್ಯಗಳನ್ನಾರಿಸಿ ಚರ್ಚಿನ ಗೋಡೆಗಳ ಮೇಲೆ ಬರೆಸಿ ಚರ್ಚನ್ನು ಅಲಂಕರಿಸುವನು. ಅಲ್ಲಿರುವ ದೇವಪೀಠದ ಮೇಲೆ ಹಾಸಲು ಒಳ್ಳೆಯ ಬಟ್ಟೆಯನ್ನು ಕೊಟ್ಟಿರುವನು. ಆದರೆ ಆ ಪವಿತ್ರಸ್ಥಾನದ ಬಳಿ ಯಾರಾದರೂ ಹೋಗಿ ಮೈಲಿಗೆ ಮಾಡಿಯಾರೆಂದು ಅದರ ಸುತ್ತ ಸ್ವಂತ ಖರ್ಚಿನಿಂದ ಒಂದು ಕಟ್ಟೆಯನ್ನು ಕಟ್ಟಿಸಿದ್ದಾನೆ. ಅವನು ಅನೇಕವೇಳೆ ನನಗೆ ಹೀಗೆ ಹೇಳಿದ್ದಾನೆ: ಅವನು ಜಹಗೀರಿಗೆ ಯಜಮಾನನಾದಾಗ ಗ್ರಾಮದ ಜನ ಗುಡಿಗೆ ಸರಿಯಾಗಿ ಹೋಗುತ್ತಿರ ಲಿಲ್ಲವಂತೆ; ಅವರು ಮಂಡಿಯೂರಿ ಪ್ರಾರ್ಥನೆಮಾಡುವುದಕ್ಕೂ ಸ್ತೋತ್ರ ಗೀತಗಳನ್ನು ಹೇಳುವುದಕ್ಕೂ ಅನುಕೂಲವಾಗುವಂತೆ ಪ್ರತಿಯೊಬ್ಬನಿಗೂ ಒಂದು ಸಣ್ಣ ಮೆತ್ತೆಯನ್ನೂ, ಒಂದು ಸ್ತೋತ್ರಪಾಠದ ಪುಸ್ತಕವನ್ನೂ ಕೊಟ್ಟನಂತೆ. ಕೀರ್ತನೆಗಳ ಸರಿಯಾದ ರಾಗರೀತಿಗಳನ್ನು ಜನಕ್ಕೆಹೇಳಿ ಕೊಡುವುದಕ್ಕೆ ಹಳ್ಳಿಹಳ್ಳಿಯನ್ನು ಸುತ್ತುವ ಸಂಗೀತ ಉಪಾಧ್ಯಾಯ ನೊಬ್ಬನನ್ನು ನಿಯಮಿಸಿದ್ದೂ ಆಗಲೇ— ಅವನ ಊರಿನವರಿಗೆ ಅದರ ಬೆಲೆ ಚೆನ್ನಾಗಿ ತಿಳಿದಿದೆ. ಅವರು ನಾನು ನೋಡಿರುವ ಇತರ ಹಳ್ಳಿ ಚರ್ಚಿನವರಿಗಿಂತಲೂ ಉತ್ತಮವಾಗಿ ಹಾಡಬಲ್ಲರು. ಆ ಸಭೆಗೆ ಯಜ ಮಾನ ಸರ್ ರೋಜರ್. ಅವನು ತನ್ನ ರೈತರನ್ನು ಹದ್ದಿನಲ್ಲಿಟ್ಟಿರುವನು. ತಾನು ಆಗಾಗ ತೂಕಡಿಸಿದರೂ ಇನ್ನು ಯಾರನ್ನೂ ಹಾಗೆ ನಿದ್ದೆ ಮಾಡಲು ಬಿಡುವುದಿಲ್ಲ. ಪಾದರಿಯ ಉಪದೇಶವಾಗುವಾಗ ತಾನು ನಿದ್ದೆ ಹೋದರೆ, ಎಚ್ಚೆತ್ತ ಕೂಡಲೆ, ಕುರ್ಚಿಯಿಂದೆದ್ದು ನಿಂತು ತನ್ನ ಸುತ್ತಣ ನೆರವಿಯನ್ನು ದೃಷ್ಟಿಸಿ ನೋಡುವನು. ತೂಕಡಿಸುವವರನ್ನು ಕಂಡರೆ ತಾನೇ ಎಚ್ಚರಿ

ಸುವನು. ಅಥವಾ ಅವರ ಬಳಿಗೆ ತನ್ನ ಸೇವಕರನ್ನು ಕಳುಹುವನು. ಆ ಮುದುಕನ ವಿಚಿತ್ರವರ್ತನೆ ಹೊರಬೀಳುವುದು ಈ ಬಗೆಯ ಸನ್ನಿವೇಶಗಳಲ್ಲಿಯೆ. ಕೆಲವುಕಡೆ ಗೀತದ ಕಡೆಯ ಶ್ಲೋಕವನ್ನು ದೀರ್ಘವಾಗಿ ಎಳೆದು ಹಾಡುವನು, ಆ ವೇಳೆಗೆ ಸಭೆ ಹಾಡನ್ನು ನಿಲ್ಲಿಸಿ ಅರ್ಧನಿಮಿಷವಾಗಿರುವುದು. ಇನ್ನು ಕೆಲವುವೇಳೆ, ಸ್ತೋತ್ರದಲ್ಲಡಗಿರುವ ಭಾವನೆ ಅವನಿಗೆ ಸಂತೋಷವನ್ನುಂಟುಮಾಡಿದ್ದರೆ ಆ ಒಂದು ಗೀತದ ಕೊನೆಯಲ್ಲಿಯೆ ಮೂರು ನಾಲ್ಕಾವರ್ತಿ "ತಥಾಸ್ತು" "ತಥಾಸ್ತು" ಎಂದು ಹೇಳಿಬಿಡುವನು. ಕೆಲವು ವೇಳೆ ಇತರರೆಲ್ಲ ಮಂಡಿಯೂರಿ ಪ್ರಾರ್ಥಿಸುತ್ತಿರುವಾಗ, ಸಭೆಯ ಸಂಖ್ಯೆಯನ್ನೆಣಿಸುವುದಕ್ಕೋ ಅವನ ರೈತರಪೈಕಿ ಯಾರು ಬಂದಿಲ್ಲವೆಂದು ಗಮನಿಸುವುದಕ್ಕೋ ತಾನೊಬ್ಬನೇ ಎದ್ದು ನಿಲ್ಲುವನು.

ಎಷ್ಟುವಿವಿಧ ವಿಷಯಗಳನ್ನು ಕುರಿತು ಅಡಿಸನ್ ಪ್ರಬಂಧಗಳನ್ನು ಬರೆದನೆಂದು ತೋರಿಸಲು ಅವನ ಪ್ರಬಂಧಗಳ ಹೆಸರು ಕೆಲವನ್ನು ಇಲ್ಲಿ ಕೊಟ್ಟಿದೆ: "ಹೆಂಗಸರೂ, ಸ್ವಾತಂತ್ರ್ಯವೂ"; "ಸ್ತ್ರೀ ಸಮಾಜ"; "ರಾಜಕೀಯವೂ ಬೀಸಣಿಗೆಯೂ"; "ನಾಟಕದ ಸಿಂಹಗಳು"; "ಕಾಫಿ ಹೊಟೇಲಿನ ರಾಜಪಟುಗಳು"; "ಕಾಫಿ ಹೊಟೇಲಿನ ಜಿಜ್ಞಾಸೆಗಳು"; "ಲಂಡನ್ ನಗರದ ಕೂಗುಗಳು"; "ಬೆಕ್ಕಿನ ಕೂಗು"; "ಚಿನ್ನದ ತಕ್ಕಡಿ"; "ಯತಿಕಂಡ ಸ್ವಪ್ನದೃಶ್ಯ"; "ಹೆಂಗಸರ ಜಗಳದ ವಿಚಾರಣೆ"; "ಹಳ್ಳಿಯ ನಡೆವಳಿಕೆ"; "ಹಳ್ಳಿಯ ಹಾವಭಾವಗಳ ಬೆಡಗು"; "ಹಲ್ಲು ಕಿರಿಯುವ ಪಂದ್ಯ"; "ಷೋಕಿ ಮನುಷ್ಯನ ತಲೆ"; "ಬೀಸಣಿಗೆಯ ವ್ಯಾಯಾಮ"; "ಫ್ರಾನ್ಸಿನಿಂದ ಬಂದ ಫ್ಯಾಷನ್ನುಗಳು"; "ಹೆಂಗಸೊಬ್ಬಳ ದಿನಚರಿ ಪುಸ್ತಕ"; "ಶಕುನಗಳು"; "ಒಲವಿನ ವಿಚಾರದಲ್ಲಿ ಬುದ್ಧಿವಾದ" ಇತ್ಯಾದಿ.

ಇದೇ ಕಾಲದವನು ಜಾನಥನ್ ಸ್ವಿಫ್ಟ್. ಅವನು ಬಹಳ ದೊಡ್ಡ ಪಂಡಿತ, ಪ್ರಚಂಡ ಮೇಧಾವಂತ. ತನ್ನ ಯೋಗ್ಯತೆಗೆ ತಕ್ಕ ಅಧಿಕಾರ ದೊರೆಯಲಿಲ್ಲವೆಂಬ ಬೇಸರ ಅವನೊಡನೆ ಹುಟ್ಟಿ ಬಂದ ಅತೃಪ್ತಿಯನ್ನು ಇನ್ನೂ ವೃದ್ಧಿಮಾಡಿತು. ಕೊನೆ ಕೊನೆಗೆ ಅವನ ಮನಸ್ಸು ಬಹು ಕಹಿಯಾಯ್ತು; ಆತನು ನರದ್ವೇಷಿಯಾಗಿಬಿಟ್ಟನು. ಅವನ ಬರೆವಣಿಗೆಯಲ್ಲಿ ಕಟುವಾದ ವಿಡಂಬನ ಹೆಚ್ಚು. ಆದರೆ ಅವನ ಕೆಲವು ಪ್ರಬಂಧಗಳು ಉತ್ತಮ ದರ್ಜೆಗೆ ಸೇರತಕ್ಕವು.

" ಸಂಭಾಷಣೆ " ಎನ್ನುವ ಪ್ರಬಂಧದ ಸ್ವಲ್ಪ ಭಾಗವನ್ನು ಇಲ್ಲಿ ಕೊಟ್ಟಿದೆ.

ಸಂಭಾಷಣೆಯ ಸ್ವರೂಪವನ್ನರಿಯಲು ನಿಜವಾದ ದಾರಿ ಒಂದೇ: ಅದರ ಲೋಪದೋಷಗಳನ್ನು ತಿಳಿಯುವುದು.

ಇದಾದ ಮೇಲೆ ಪ್ರತಿಯೊಬ್ಬನೂ ತನ್ನೊಳಗಿನ ದೋಷಗಳನ್ನು ಬಿಡುವುದಕ್ಕಾಗಿ ಕೆಲವು ಸೂತ್ರಗಳನ್ನು ಮಾಡಿಕೊಳ್ಳಬೇಕು. ಮಹತ್ತಾದ ಬುದ್ಧಿಶಕ್ತಿಯಾಗಲಿ ಪ್ರತಿಭೆಯಾಗಲಿ ವ್ಯಾಸಂಗವಾಗಲಿ ಅದಕ್ಕೆ ಬೇಕಿಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ಸಹಜವಾಗಿ ಬಂದಿರುವ ಅಥವಾ ಹೆಚ್ಚು ಶ್ರಮವಿಲ್ಲದೆ ಅವನು ಸಂಪಾದಿಸಬಲ್ಲ ಬುದ್ಧಿ ಶಕ್ತಿ ಸಾಕು. ಪ್ರತಿಯೊಬ್ಬನೂ ಸೊಗಸಾಗಿ ಸಂಭಾಷಣೆ ಮಾಡಲಾರನಾದರೂ ಹಿತವಾಗಿ ಮಾತನಾಡುವ ಶಕ್ತಿಯನ್ನು ಪ್ರಕೃತಿ ಅವನಿಗೆ ಕೊಟ್ಟಿದೆ. ತಮ್ಮಲ್ಲಿರುವ ಕೆಲವು ಅಲ್ಪದೋಷಗಳನ್ನು ತಿದ್ದಿಕೊಂಡರೆ ಜನರ ಮೆಚ್ಚುಗೆ ಪಡೆಯುವಂತೆಯೂ ಅವರಿಗೆ ಹಿತವಾಗುವಂತೆಯೂ ನೂರಾರು ಮಂದಿ ಮಾತನಾಡಬಲ್ಲರು. ಅಷ್ಟಿಲ್ಲದಿದ್ದರೆ ಅವರ ಮಾತು ಕನಿಷ್ಠಪಕ್ಷ ಸಹ್ಯವಾಗಿಯಾದರೂ ಆಗುವುದು.

ಹೀಗೆ ಸಂಭಾಷಣೆಯೆಂಬುದು ಬಹು ಪ್ರಯೋಜನವುಳ್ಳದ್ದು; ಬಹುನಿಷ್ಕಲಂಕವಾದದ್ದು; ಪ್ರತಿಯೊಂದು ವಯಸ್ಸಿಗೂ ಬದುಕಿನ ಪ್ರತಿಯೊಂದು ಸ್ಥಿತಿಗೂ ಒಪ್ಪುವಂಥಾದ್ದು; ಎಲ್ಲ ಜನರ ಶಕ್ತಿಗೂ ನಿಲುಕು

ವಂಥಾದ್ದು. ಈ ಬಗೆಯ ಸಂತೋಷ ಅಲಕ್ಷಕ್ಕೂ ದುರುಪಯೋಗಕ್ಕೂ ಒಳಗಾಗಿರುವುದನ್ನು ನೋಡಿ ನನಗೆ ಆಗ್ರಹ. ಅದ್ದರಿಂದಲೇ ಈ ವಿಷಯವನ್ನು ಕುರಿತು ನನ್ನ ಆಲೋಚನೆಗಳನ್ನು ಪ್ರಕಟಿಸಲು ನಾನು ತೊಡಗಿದ್ದು.

ನಾನು ಇಲ್ಲಿ ಹೇಳಿರುವ ದೋಷಗಳಲ್ಲಿ ಕೆಲವು ಸಾಮಾನ್ಯವಾಗಿ ಎಲ್ಲರ ಗಮನಕ್ಕೂ ಬಂದಿರತಕ್ಕವು. ಇನ್ನು ಕೆಲವು ಅಪೂರ್ವವಾಗಿ ತೋರಿಬರುವಂಥವು. ಅಂತು ಅನೇಕ ಜನರು ಒಂದಲ್ಲ ಒಂದು ದೋಷವನ್ನು ಗಮನಿಸಿರುವರು, ಒಪ್ಪಿಕೊಳ್ಳುವರು. ಒಂದು ಸಮಯದಲ್ಲಿ ಅಲ್ಲದಿದ್ದರೆ ಇನ್ನೊಂದರಲ್ಲಿ ಈ ದೋಷಗಳಿಗೆ ಒಳಗಾಗದವರು ಕೇವಲ ವಿರಳ.

ಉದಾಹರಣೆಗಾಗಿ, ಹೆಚ್ಚು ಮಾತನಾಡುವುದು ತಪ್ಪು ಎಂದು ಸಾಮಾನ್ಯವಾಗಿ ಹೇಳದವರೇ ಇಲ್ಲ. ಆದರೂ ಐದು ಜನ ಸೇರಿದ ಕಡೆ ಒಬ್ಬನೇ ವಿಪರೀತ ಮಾತನಾಡಿ, ಇತರರನ್ನು ನಿರ್ಬಂಧಕ್ಕೂ, ಆಲಸ್ಯಕ್ಕೂ ತಳ್ಳದೇ ಹೋಗುವುದು ಅಪರೂಪವೇ ಎಂದು ನನ್ನ ತಿಳಿವಳಿಕೆ. ಹೆಚ್ಚು ಮಾತನಾಡುವವರಲ್ಲಿ ಹಲವು ಬಗೆಯುವರುಂಟು. ಒಂದು ಬಗೆಯವನಿಗೆ ಇತರರ ವಿಚಾರ ಯಾವ ಯೋಚನೆಯೂ ಇಲ್ಲ; ಸಮಾಧಾನದಿಂದ ಉದ್ದೇಶಪೂರ್ವಕವಾಗಿ ಮಾತನಾಡುವನು; ಬಹಳ ಆಲೋಚಿಸಿ, ಎಚ್ಚರಿಕೆಯಿಂದ ಮುಂದುವರಿಯುವನು. ಅವನ ಕ್ರಮದಲ್ಲಿ ಪೀಠಿಕೆ ಮೊದಲು; ಆಮೇಲೆ ಕೆಲವು ಅಪ್ರಸ್ತುತ ಸಂಗತಿಗಳ ನಿರೂಪಣೆ; ಯಾವುದೋ ಒಂದು ಸೂಚನೆ ಬಂದರೆ ಅದರಿಂದ ಇನ್ನೊಂದು ಕಥೆಯನ್ನು ಜ್ಞಾಪಿಸಿಕೊಳ್ಳುವನು ; ಹೇಳುತ್ತಿರುವ ಕಥೆ ಮುಗಿದ ಕೂಡಲೆ ಆ ಕಥೆಯನ್ನು ತೆಗೆದುಕೊಳ್ಳುವೆನೆಂದು ಶ್ರೋತೃಗಳಿಗೆ ಭರವಸೆ ಕೊಡುವನು. ಮಧ್ಯೆಮಧ್ಯೆ ಸಂಭಾಷಣೆಯ ವಿಷಯಕ್ಕೆ ಹಿಂದಿರುಗುವನು. ಯಾವುದೋ ಹೆಸರು ನೆನಪಿಗೆ ಬರಲಿಲ್ಲವೆಂದು ತಲೆಯನ್ನು ಎರಡು ಕೈಗಳಲ್ಲಿಯೂ ಹಿಡಿದುಕೊಳ್ಳುವನು. ತನ್ನ ಜ್ಞಾಪಕಶಕ್ತಿಯನ್ನು ದೂರುವನು. ಇಷ್ಟು ಹೊತ್ತೂ ಜೊತೆಯವರು ನಿರೀಕ್ಷೆಯಲ್ಲಿರುವರು. ಕಡೆಗೆ ಹೆಸರು ನೆನಪಿಗೆ ಬರದಿದ್ದರೂ ಚಿಂತೆಯಿಲ್ಲವೆಂದು ಹೇಳಿ ಮುಂದುವರಿಯುವನು. ಸಾಲದ್ದಕ್ಕೆ ಆ ಕಥೆ ಜೊತೆಯವರು ಐವತ್ತು ಸಲ ಆಗಲೇ ಕೇಳಿದ ಕಥೆಯೇ.

---

# ೮. ಆಲಿವರ್ ಗೋಲ್ಡ್ ಸ್ಮಿತ್

ಹದಿನೆಂಟನೆಯ ಶತಮಾನದಲ್ಲಿ ಪತ್ರಿಕೆಗಳು ಹೆಚ್ಚಾದುವು; ಪ್ರಬಂಧಗಳೂ ಹೆಚ್ಚಿದವು. ಆದರೆ ಉತ್ತಮ ರೀತಿಯಲ್ಲಿ ಪ್ರಬಂಧಗಳನ್ನು ಬರೆದವರು ಹೆಚ್ಚು ಮಂದಿ ಇಲ್ಲ. ತನ್ನ ಕಾಲಕ್ಕೆ ಸಾಹಿತ್ಯ ಚಕ್ರವರ್ತಿಯೆನಿಸಿಕೊಂಡಿದ್ದ ಡಾಕ್ಟರ್ ಜಾನ್‌ಸನ್ ಎರಡು ಪತ್ರಿಕೆಗಳನ್ನು ಕೆಲವು ಕಾಲ ನಡೆಸಿದನು. ಅವಕ್ಕೆ "ರ್‍ಯಾಂಬ್ಲರ್" ಮತ್ತು "ಐಡ್ಲರ್" ಎಂದು ಹೆಸರು. ಇವನ ಜೀವನ ಕಷ್ಟಪರಂಪರೆಗಳಿಂದ ಕೂಡಿದ್ದು; ಅನುಭವ ಸರ್ವತೋಮುಖವಾದ್ದು. ಮಾತನಾಡುವ ಶಕ್ತಿ ಬಿಗಿಯೂ ಬಲಿಷ್ಠವೂ ಆದದ್ದು ಮತ್ತು ಮನಸ್ಸು ಸುಸಂಸ್ಕೃತವಾದದ್ದು. ಅವನು ದೊಡ್ಡ ಪಂಡಿತನಾದ್ದರಿಂದಲೂ ಸ್ವಾಭಿಮಾನದಿಂದ ತುಂಬಿದ ವ್ಯಕ್ತಿಯಾದ್ದರಿಂದಲೂ ಅವನ ಶೈಲಿ ಅಲಂಕೃತವಾದದ್ದು. ಆದರೂ ಅದು ಶುದ್ಧವೂ ತಿಳಿಯೂ ಸಮರ್ಥವೂ ಆದದ್ದು. ಅಡಿಸನ್ನನ ಲಾಲಿತ್ಯ ಹಾಸ್ಯ ಜಾನ್ಸನ್ನನಲ್ಲಿ ಇರಲಿಲ್ಲ.

ಆ ಕಾಲದ ಪ್ರಬಂಧ ಸಾಹಿತಿಗಳಲ್ಲಿ ಶ್ರೇಷ್ಠನಾದವನು ಆಲಿವರ್ ಗೋಲ್ಡ್ ಸ್ಮಿತ್. ಅವನ ಪ್ರಬಂಧಗಳು ಶುದ್ಧ ಸಾಹಿತ್ಯಕ್ಕೆ ಸೇರಿದವು. ಕೆಲವುಗಳಲ್ಲಿ ಅವನ ಆತ್ಮಕಥೆ ಚಿತ್ರಿತವಾಗಿದೆ. ಬಡತನದ ಸಾವಿರಾರು ಯಾತನೆಗಳಲ್ಲಿ ಹಾದ ಅವನ ಹೃದಯ ಹೂವಿನಂತೆ ಮೃದುವಾಗಿ ಕೋಮಲವಾಗಿದ್ದಿತು. ಅವನ ಬರಹದಲ್ಲಿ ಬಡವರ ಮೇಲಣ ದಯೆಯನ್ನು ಪ್ರಕಟಿಸದ

ಪುಟ ಒಂದೂ ಇಲ್ಲವೆಂದು ಹೇಳುವ ವಾಡಿಕೆಯುಂಟು. ಅವನ ಮನಸ್ಸು ಎಷ್ಟು ನಯವಾದುದು, ಸ್ವಭಾವ ಎಷ್ಟು ಮೃದುವಾದುದು, ಅನುಭವ ಎಷ್ಟು ಹಿತವಾದುದು ಎನ್ನುವುದು ಆ ಒಂದು ಮಾತಿನಿಂದಲೇ ತಿಳಿಯುತ್ತದೆ. ಕಠಿನ ಸಮಾಜ ಅವನನ್ನು ನೂರಾರು ಗೋಳಿಗೂ ಸಂಕಟಕ್ಕೂ ಈಡು ಮಾಡಿತು. ಏನಾದರೂ ಅವನ ಒಳ್ಳೆಯ ಸ್ವಭಾವಕ್ಕೆ ಕುಂದು ಬರಲಿಲ್ಲ. ಒಳ್ಳೆಯವನೆಂಬ ಹೆಮ್ಮೆ ಅವನಿಗಿರಲಿಲ್ಲ. ಉತ್ತಮ ಸಾಹಿತ್ಯವನ್ನೋದುವಾಗ ನಾವು ಉತ್ತಮ ವ್ಯಕ್ತಿಗಳ ಸಹವಾಸವನ್ನು ಹೊಂದಿ ಅದರ ಸಹಾಯದಿಂದ ನಾವು ಉತ್ತಮರಾಗುತ್ತೇವೆ. ಈಗಲೂ ಗೋಲ್ಡ್‌ಸ್ಮಿತ್ತಿನ ಪ್ರಬಂಧಗಳನ್ನೋದಿದವರು ದಯಾಮಯರಾಗಿ ಬಡವರಿಗೆ ಉಪಕಾರ ಮಾಡುವ ಬುದ್ಧಿಯನ್ನು ಹೊಂದುವರು. ಇಲ್ಲಿ ಕೊಡುವ ಕರಿ ಉಡಿಗೆಯವನ ಚಿತ್ರ ಗೋಲ್ಡ್‌ಸ್ಮಿತ್ತನ ಆತ್ಮಚಿತ್ರ.

## ಕರಿ ಉಡುಪಿನವನು

[ಈ ಪ್ರಬಂಧವನ್ನು ಗೋಲ್ಡ್‌ಸ್ಮಿತ್ ಬರೆಯುತ್ತಿರುವುದು ಚೀನಾ ದೇಶದ ಯಾತ್ರಿಕನ ವೇಷದಲ್ಲಿ. ಕರಿ ಉಡುಪಿನವನು ಗೋಲ್ಡ್‌ಸ್ಮಿತ್ತೇ; ಉಡುಪು ಕಪ್ಪಾದರೂ ಇವನ ಶೀಲ ಒಳ್ಳೆಯದು.]

ನನಗೆ ನಾನಾ ಜನರ ಪರಿಚಯವನ್ನು ಪಡೆಯಬೇಕೆಂಬ ಮನಸ್ಸಿದ್ದರೂ ನಿಕಟಸ್ನೇಹವನ್ನು ನಾನು ಬಯಸುವುದು ಕೆಲವರಲ್ಲಿ ಮಾತ್ರವೇ. ನಾನು ಅನೇಕವೇಳೆ ಬಣ್ಣಿಸಿರುವ ಕರಿ ಉಡುಪಿನವನಲ್ಲಿ ನನಗೆ ಬಹಳ ಮರ್ಯಾದೆ. ಅವನ ಸ್ನೇಹವನ್ನು ಸಂಪಾದಿಸಲು ನನಗೆ ಆಸೆ. ಅವನ ನಡೆನುಡಿಗಳಲ್ಲಿ ವಿಚಿತ್ರವೂ ವಿರುದ್ಧವೂ ಆಗಿರುವ ಅಂಶ ಸ್ವಲ್ಪ ಮಿಶ್ರವಾಗಿರುವುದು ನಿಜ. ಅವನನ್ನು ವಿಚಿತ್ರಪುರುಷರಲ್ಲಿ ವಿಚಿತ್ರಪುರುಷನೆಂದು ಹೇಳಬಹುದು. ಅವನ ಧಾರಾಳಕ್ಕೆ ಮಿತಿಯೇ ಇಲ್ಲ. ಆದರೂ ತಾನು

ಕೃಪಣನೆಂದೂ, ಲೌಕಿಕದಲ್ಲಿ ಎಚ್ಚರಿಕೆಯುಳ್ಳವನೆಂದೂ ಜನರಲ್ಲಿ ಭಾವನೆಯನ್ನು ಹುಟ್ಟಿಸಬೇಕೆಂದು ನಟಿಸುವನು. ಅವನ ಮಾತಿನಲ್ಲಿ ಸ್ವಾರ್ಥವನ್ನೂ ಲೋಭವನ್ನೂ ಪ್ರತಿಪಾದಿಸುವ ಶುಷ್ಕ ನೀತಿಗಳು ತುಂಬಿವೆ. ಆದರೆ ಅವನ ಹೃದಯದ ತುಂಬ ಅನಂತವಾದ ಒಲವು. ಅವನ ಮುಖ ಕರುಣೆಯಿಂದ ಅರಳಿರುವಾಗ ತಾನು ಮಾನವದ್ವೇಷಿಯೆಂದು ಹೇಳಿಕೊಳ್ಳುವುದನ್ನು ನಾನು ನೋಡಿದ್ದೇನೆ. ಅವನ ಕಣ್ಣಿನಿಂದ ಕರುಣೆಯ ಪ್ರಭಾವ ಹರಿಯುವಾಗ ಬಾಯಿಂದ ಬಹಳ ಕಠಿನವಾದ ಮಾತುಗಳನ್ನು ಕೇಳಿದ್ದೇನೆ. ಕರುಣಿಗಳಂತೆ, ಕೋಮಲಸ್ವಭಾವದವರಂತೆ ಒರಟುಮಂದಿ ನಟಿಸುವುದು ಸರಿ; ಆದರೆ—ನನಗೆ ತಿಳಿದವರಲ್ಲಿ—ನೈಜವಾದ ಒಳ್ಳೆಯ ಗುಣಕ್ಕೆ ನಾಚಿಕೆ ಪಟ್ಟವನು ಅವನೊಬ್ಬನೇ. ಮೋಸಗಾರ ತನ್ನ ನಿರ್ದಯೆಯನ್ನು ಬಚ್ಚಿಡುವುದಕ್ಕೆ ಎಷ್ಟು ಕಷ್ಟಪಡುವನೋ ಅಷ್ಟೇ ಕಷ್ಟವನ್ನು ಕರಿ ಉಡುಪಿನವನು ತನ್ನ ಮೃದುಸ್ವಭಾವವನ್ನು ಬಚ್ಚಿಡುವುದಕ್ಕೆ ಕಷ್ಟಪಡುವನು. ಆದರೆ ಅವನು ಸ್ವಲ್ಪ ಮೈಮರೆತರೆ ಸಾಕು; ಅವನ ಮುಖವಾಡ ಕಳಚಿಬಿದ್ದು, ಅವನನ್ನು ನೋಡುವವರಿಗೂ ಅವನ ನಿಜರೂಪ ಕಂಡುಬಿಡುವುದು.

ಶ್ರೀಮಂತನಾದ ಅಡಿಸನ್ ಶ್ರೀಮಂತರ ಅವಿವೇಕವನ್ನು ಹೊರಗೆಡಹಲು ಸರ್ ರೋಜರಿನ ಪಾತ್ರವನ್ನು ನಿರ್ಮಿಸಿದ ಹಾಗೆಯೇ ಬಡವರ ಕಷ್ಟಸುಖಗಳನ್ನೂ ಆಸೆಗಳನ್ನೂ ಜಂಭಗಳನ್ನೂ ಉಪಾಯಗಳನ್ನೂ ದಾರಿದ್ರ್ಯ ದುಃಖವನ್ನೂ ಅರಿತ ಗೋಲ್ಡ್‌ಸ್ಮಿತ್ ಬೋಟಿಬ್ಸ್ ಎಂಬ ಪಾತ್ರವನ್ನು ಸೃಷ್ಟಿಸಿದ. ಬಡತನವನ್ನು ಅನುಭವಿಸುವ ಕಷ್ಟ ಹಾಗಿರಲಿ, ಬಡತನವನ್ನು ಮುಚ್ಚಿಡಲು ಬಡವನು ಅನುಭವಿಸುವ ಕಷ್ಟ ಅಧಿಕವಾದ್ದು. ಇದೇ ಬೋಟಿಬ್ಸ್ ಪಾತ್ರದ ಸ್ವಾರಸ್ಯ. ಅವನ ವಿಚಾರವಾಗಿ ಬರೆದಿರುವ ಮೊದಲ ಪ್ರಬಂಧದ ಕೊನೆಯ ಭಾಗ ಇದು.

ಬೋಟಿಬ್ಸ್ ನಮ್ಮನ್ನು ಬಿಟ್ಟು ಹೋದಮೇಲೆ ನನ್ನ ಸ್ನೇಹಿತ ಅವನನ್ನು ಈ ರೀತಿ ವರ್ಣಿಸಿದ: ಅವನ ಉಡುಪು ,ಅವನ ನಡತೆಗಿಂತ

ಕಡಮೆ ಹಾಸ್ಯಾಸ್ಪದವಲ್ಲ. ಈ ದಿನ ನೋಡಿದರೆ ಅವನು ತೊಟ್ಟಿರುವುದು ಚಿಂದಿಬಟ್ಟೆ; ಇನ್ನೊಂದು ದಿನ ನೋಡಿದರೆ ಕಲಾಪತ್ತು ಅಂಚಿನ ವಸನ. ಶ್ರೀಮಂತರನ್ನು ಕುರಿತು ಅತಿ ಸಲಿಗೆಯುವರಂತೆ ಮಾತನಾಡಿದರೂ ಅವರ ಪರಿಚಯ ಕಾಫಿ ಹೊಟೇಲಿನಲ್ಲೂ ಆದಹಾಗಿಲ್ಲ. ಅದು ಹಾಗಿರಲಿ, ಸಮಾಜದ ಅನುಕೂಲಕ್ಕೋಸ್ಕರವೂ ಅವನ ಅನುಕೂಲಕ್ಕೋಸ್ಕರವೂ ದೇವರು ಅವನನ್ನು ಬಡವನನ್ನಾಗಿ ಸೃಷ್ಟಿಸಿದ್ದಾನೆಂದು ಹೇಳಬೇಕು. ಪ್ರಪಂಚವೆಲ್ಲ ಅವನ ಬಡತನವನ್ನು ನೋಡುತ್ತಿದ್ದರೂ, ಅದು ಯಾರ ಕಣ್ಣಿಗೂ ಬಿದ್ದಿಲ್ಲವೆಂದೇ ಅವನ ಭ್ರಮೆ. ಹೊಗಳುಗಾರಿಕೆಯನ್ನು ಅಭ್ಯಾಸಮಾಡಿರುವುದರಿಂದ ಅವನ ಸಹವಾಸ ಕೊಂಚ ಮಟ್ಟಿಗೆ ಹಿತವಾದುದೇ. ಅವನ ಮಾತಿನ ಮೊದಲಭಾಗದಿಂದ ಎಲ್ಲರಿಗೂ ಸಂತೋಷವಾಗುವುದು; ಆದರೆ ಹಣದ ಯಾಚನೆಯಲ್ಲಿ ಅದು ಕೊನೆಗೊಳ್ಳುವುದೆಂದು ಎಲ್ಲರೂ ಬಲ್ಲರು. ಈ ವಿನೋದ ನಡತೆ ಯೌವನವಿರುವವರೆಗೂ ಒಪ್ಪುತ್ತದೆ; ಆಗ ಹೇಗೋ ಅರಹೊಟ್ಟೆಯಷ್ಟು ಅನ್ನವನ್ನು ಸಂಪಾದಿಸಬಹುದು. ಆದರೆ ವಯಸ್ಸಾದಮೇಲೆ ಮುಪ್ಪಿನ ಗಾಂಭೀರ್ಯಕ್ಕೂ ಆ ನಕಲಿಗೂ ಹೊಂದಿಕೆ ಇರುವುದಿಲ್ಲ; ಆಗ ಎಲ್ಲರೂ ಅವನನ್ನು ದೂರಮಾಡುವುದು ಅವನಿಗೆ ತಿಳಿಯುತ್ತದೆ; ಹಿಂದೆ ತಾನು ಜರೆಯುತ್ತಿದ್ದ ಯಾವನೋ ಒಬ್ಬ ಶ್ರೀಮಂತನ ಹಂಗಿನಲ್ಲಿ ಅವನು ಇರಬೇಕಾಗುತ್ತದೆ. ಆಗ ಯಜಮಾನ ಉದ್ದೇಶಪಟ್ಟು ತೋರಿಸುವ ತಿರಸ್ಕಾರವನ್ನು ಅನುಭವಿಸಬೇಕು; ಆಳುಗಳ ಮೇಲೆ ಚಾಡಿಹೇಳುವ ಗೂಢಚಾರನಾಗಿಯೋ ಮಕ್ಕಳು ವಿಧೇಯರಾಗುವಂತೆ ಅವರನ್ನು ಹೆದರಿಸುವ ಗೊಗ್ಗಯ್ಯನಾಗಿಯೋ ಇರಬೇಕು.

'ನಗರದಲ್ಲಿ ಒಂದಿರುಳು' ಎನ್ನುವ ಪ್ರಬಂಧ ಮರುಕದ ಸುಂದರ ಚಿತ್ರ. ಮನೆಮಠವಿಲ್ಲದ ಭಿಕ್ಷುಕರು ನಡುರಾತ್ರಿಯ ಚಳಿಯಲ್ಲಿ ಲಂಡನ್ನಿನ ರಸ್ತೆಗಳಲ್ಲಿ ನರಳುತ್ತ ಬಿದ್ದಿರುವುದನ್ನು ನೋಡಿ ಅವರನ್ನು ಆ ನೋವಿಗೆ ಗುರಿಮಾಡಿದ ಮಾನವ ಸಮಾಜವನ್ನು ನಿಂದಿಸುತ್ತ ಪ್ರಬಂಧವನ್ನು ಹೀಗೆ ಮುಕ್ತಾಯಗೊಳಿಸಿದ್ದಾನೆ;

ನಾನು ಮನುಷ್ಯನಾಗಿ ಏಕೆ ಹುಟ್ಟಿದೆ ? ನನಗೆ ನಿವಾರಿಸಲು ಸಾಧ್ಯವಿಲ್ಲದ ಗೋಳನ್ನೂ ದುಃಖಿಗಳನ್ನೂ ನಾನು ಏಕೆ ನೋಡುತ್ತಿದ್ದೇನೆ ? ಮನೆಮಠವಿಲ್ಲದ ಬಡಪ್ರಾಣಿಗಳೆ ! ಲೋಕವು ನಿಮ್ಮನ್ನು ಬಯ್ಯುವುದೇ ಹೊರತು ನಿಮಗೆ ಸಹಾಯ ನೀಡುವುದಿಲ್ಲ. ದೊಡ್ಡಮನುಷ್ಯರ ಅತ್ಯಲ್ಪ ತೊಂದರೆಗಳನ್ನೂ ಶ್ರೀಮಂತರ ಕಾಲ್ಪನಿಕ ದುಃಖಗಳನ್ನೂ ಕವಿವಾಣಿ ಹೆಚ್ಚಾಗಿ ವರ್ಣಿಸುವುದು; ನಮ್ಮ ಚಿತ್ತವನ್ನು ಸೆಳೆದು, ಅವರಿಗಾಗಿ ನಾವು ದುಃಖಿಸುವಂತೆ ಮಾಡುವುದು. ಬಡವರ ಗೋಳನ್ನು ಗಮನಿಸುವರಾರು? ಅವರು ಸಮಾಜದ ನಿರಂಕುಶ ಆಧಿಪತ್ಯದ ನೂರಾರು ಕೋಟಲೆಗಳಿಗೆ ಸಿಕ್ಕಿ ನರಳುವರು. ಇತರರಿಗೆ ರಕ್ಷಣೆಯನ್ನು ಕೊಡುವ ಪ್ರತಿಯೊಂದು ಶಾಸನವೂ ಅವರಿಗೆ ಶತ್ರುವಾಗುವುದು.

ಅದಿರಲಿ ; ಈ ನನ್ನ ಹೃದಯ ಇಷ್ಟೇಕೆ ಸೂಕ್ಷ್ಮವಾಯಿತು ? ಅಥವಾ ನನ್ನ ಹೃದಯದ ಅನುತಾಪಕ್ಕೆ ತಕ್ಕಂತೆ ನನಗೆ ಸಂಪತ್ತೇಕೆ ದೊರೆಯಲಿಲ್ಲ ? ದುಃಖವನ್ನು ನಿವಾರಣೆ ಮಾಡುವ ಸಾಮರ್ಥ್ಯವಿಲ್ಲದ ಕರುಣೆ ಮನುಷ್ಯನನ್ನು ಹೆಚ್ಚು ದುಃಖಿಯನ್ನಾಗಿ ಮಾಡುವುದು. ಯಾರ ದುಃಖವನ್ನು ನಿವಾರಿಸಲು ಹಾತೊರೆಯುವನೊ ಅವನ ದುಃಖಕ್ಕಿಂತ ತನ್ನ ದೌರ್ಬಲ್ಯದ ದುಃಖವೇ ಹೆಚ್ಚಾಗುವುದು.

ಗೋಲ್ಡ್‌ಸ್ಮಿತ್‌ನಲ್ಲಿ ಕಾಣುವ ಈ ಭೂತದಯೆ ಮುಂದೆ ಕೆಲವು ವರ್ಷಗಳಲ್ಲಿ ಯೂರೋಪನ್ನೆಲ್ಲಾ ಆವರಿಸಿ ರಾಜಕೀಯದಲ್ಲಿಯೂ ಸಾಹಿತ್ಯದಲ್ಲಿಯೂ ದೊಡ್ಡ ಕ್ರಾಂತಿಯನ್ನುಂಟುಮಾಡಿತು. ಅವನು ತೀರಿಹೋದ ಹದಿನೈದು ವರ್ಷಕ್ಕೆ ಫ್ರಾನ್ಸಿನಲ್ಲಿ ಮಹಾಕ್ರಾಂತಿಯುಂಟಾಗಿ ಮಾನವರೆಲ್ಲರೂ ಒಂದೆ, ಎಲ್ಲರೂ ಸೋದರರು, ಪ್ರತಿಯೊಬ್ಬನಿಗೂ ಸ್ವಾತಂತ್ರ್ಯದ ಹಕ್ಕುಂಟು, ಎಂಬ ತತ್ವಗಳು ಜನಿಸಿ, ಹರಡಿ, ಬಹಳ ಪರಿಣಾಮಕಾರಿಗಳಾದವು. ಇದರ ಫಲವಾಗಿ ಸ್ವಾಭಿಮಾನ ಬೆಳೆದು, ಸಾಹಿತ್ಯ ಪ್ರಪಂಚದಲ್ಲಿ ಸ್ವವಿಷಯವಾಗಿಯೇ ಮಾತನಾಡುವ

ಅಭ್ಯಾಸ ತಿರುಗಿ ಅಧಿಕವಾಗಿ ಪ್ರಬಲಗೊಂಡಿತು. ಕಾವ್ಯದಲ್ಲಿ ಭಾವಗೀತೆಗಳು ಹುಟ್ಟಿದುವು; ಗದ್ಯದಲ್ಲಿ, ಪ್ರಬಂಧಗಳು ಹೆಚ್ಚಾದುವು. ಹದಿನಾರನೆಯ ಶತಮಾನದ ಕೊನೆಯಲ್ಲಿ ಹುಟ್ಟಿದ ಪ್ರಬಂಧ ಎರಡು ಶತಮಾನಗಳು ಕಳೆದಿದ್ದರೂ, ಅಡಿಸನ್, ಗೋಲ್ಡ್‌ಸ್ಮಿತ್ ಇವರಂಥಾ ಪ್ರತಿಭಾಶಾಲಿಗಳ ಕೈಯಲ್ಲಿ ಹಾದು ಬಂದಿದ್ದರೂ ತನಗೆ ಸಮನಾದ ಸ್ಥಾನವನ್ನು ಹೊಂದಿರಲಿಲ್ಲ. ಪ್ರಬಂಧವು ಸಾಹಿತ್ಯವಿಮರ್ಶೆ ಮುಂತಾದ—ವಿವಿಧ ಉಪಯೋಗಕ್ಕೆ ಹದವಾಗಿದ್ದರೂ ಅದರ ಪ್ರಕಟಣೆಗೆ ತಕ್ಕ ಉತ್ತೇಜನ ದೊರೆತಿರಲಿಲ್ಲ. ವರ್ತಮಾನ ಪತ್ರಿಕೆಗಳು ಅವುಗಳ ಪ್ರಕಟಣೆಗೆ ಅನುವಾಗಲಿಲ್ಲ. ವಿಮರ್ಶಾತ್ಮಕ ಪ್ರಬಂಧಗಳು ಪುಸ್ತಕಗಳ ಮುನ್ನುಡಿಗಳಾಗಿ ಅಥವಾ ಬೇರೆ ಸಣ್ಣ ಪುಸ್ತಕಗಳಾಗಿ ಪ್ರಕಟವಾಗಬೇಕಾಗಿತ್ತು. ಅನೇಕವೇಳೆ ಈ ಬಗೆಯ ಪ್ರಬಂಧಗಳನ್ನು ಬರೆಯುತ್ತಿದ್ದವರು ಹೊಟ್ಟೆಪಾಡಿಗಾಗಿ ಒಬ್ಬ ವ್ಯಕ್ತಿಯ ಅಥವಾ ಒಂದು ಪಕ್ಷದ ಪರವಾಗಿ ಬರೆಯಬೇಕಾಗಿತ್ತು. ಪ್ರತಿಭಾಶಾಲಿಗಳು ಬರೆದರೂ ಅವರಿಗೆ ಹೆಚ್ಚು ಗೌರವ ದೊರೆಯಲಿಲ್ಲ. ಒಟ್ಟಿನಲ್ಲಿ ಪ್ರಬಂಧ ದೊಡ್ಡ ಸಾಹಿತ್ಯದ ಗುಂಪಿಗೆ ಸೇರಲು ಅವಕಾಶವಿರಲಿಲ್ಲ.

---

## ೯. ಚಾರಲ್ಸ್ ಲ್ಯಾಂಬ್

ಹತ್ತೊಂಬತ್ತನೆಯ ಶತಮಾನದಲ್ಲಿ 'ಮ್ಯಾಗಜೀನ್' ಎಂಬ ಮಾಸಪತ್ರಿಕೆಗಳು ಹುಟ್ಟಿಬಂದುದರಿಂದ ಪ್ರಬಂಧಕ್ಕೆ ಸರಿಯಾದ ಸ್ಥಾನ ಸಿಕ್ಕಿತು. ಅದರ ಬೆಳವಣಿಗೆಗೆ ಅವಶ್ಯ

ವಾಗಿದ್ದ ಸಂಸ್ಥೆಗಳು ಹುಟ್ಟಿದುವು. ಪ್ರಬಂಧ ಬರೆಯುವವರಿಗೆ ಪ್ರತಿಫಲವಾಗಿ ಸ್ವಲ್ಪ ಹಣವೂ ದೊರೆಯುವಂತಾಯಿತು. ಈ ರೀತಿಯಾಗಿ ರಾಜಕೀಯ ಸಾಮಾಜಿಕ ಆರ್ಥಿಕ ಸ್ಥಿತಿಗಳಲ್ಲಿ ಉಂಟಾದ ಬದಲಾವಣೆ ಪ್ರಬಂಧಕ್ಕೆ ಹೊಸ ಚೈತನ್ಯವನ್ನು ಕೊಟ್ಟು ಅದರ ಬೆಳವಣಿಗೆಗೆ ಅನುಕೂಲವಾದ ವಾತಾವರಣ ವನ್ನು ಕಲ್ಪಿಸಿತು. ಮಾಂಟೇನ್ ಆರಂಭಮಾಡಿದ ಸ್ವವಿಷಯಾ ತ್ಮಕವಾದ ಪ್ರಬಂಧ—ಅದೇ ಲಲಿತ ಪ್ರಬಂಧ—ಅಭಿ ವೃದ್ಧಿಗೆ ಬಂದು ಸ್ಥಳ ಕಾಲಗಳ ಪ್ರೋತ್ಸಾಹದಿಂದ ಉತ್ಕೃಷ್ಟ ಸ್ವರೂಪವನ್ನು ಪಡೆಯಿತು. ಪ್ರಬಂಧ ಸಾಹಿತ್ಯದ ಶಿಖರ ವನ್ನೇರಿದವನು ಈ ಕಾಲದ ಚಾರಲ್ಸ್ ಲ್ಯಾಂಬ್. ಇವನನ್ನು ಪ್ರಬಂಧಕಾರರ ರಾಜನೆಂದು ಹೇಳುವುದುಂಟು. ರಾಜ ಎನ್ನುವ ಮಾತಿನಲ್ಲಿ ಹಿರಿಮೆ, ಬೆಡಗು, ರಮ್ಯತೆಗಳು ಅಡಗಿವೆ. ಓದುಗ ನನ್ನು ಬಹಳ ಕಾಲದಿಂದ ಪರಿಚಿತನಾದ ಆಪ್ತಸ್ನೇಹಿತನಂತೆ ಭಾವಿಸಿ, ಪಕ್ಕದಲ್ಲಿ ಸುಖಾಸನದ ಮೇಲೆ ಕುಳ್ಳಿರಿಸಿಕೊಂಡು, ರುಚಿಯಾದ ಉಪಾಹಾರಗಳನ್ನು ಸವಿಯುತ್ತ ರಹಸ್ಯಗಳನ್ನು ಕೇವಲ ಇಬ್ಬರಿಗೇ ಸಂಬಂಧಿಸಿದಂತೆ ಹೇಳುವುದು, ಹೊಸ ಪ್ರಬಂಧದ ಶೈಲಿಯಾಯಿತು. ಚಾರಲ್ಸ್ ಲ್ಯಾಂಬಿನ ಪ್ರಬಂಧ ಗಳನ್ನೋದಿ ಅವನ ಜೀವನದ ಹಲವು ವಿಚಾರಗಳನ್ನೂ ಅವನ ಮನಸ್ಸಿನ, ಆತ್ಮದ ಮತ್ತು ವ್ಯಕ್ತಿತ್ವದ ಸಮಸ್ತ ಲಕ್ಷಣಗಳನ್ನೂ ತಿಳಿಯಬಹುದು. ಈ ಪ್ರಬಂಧಭಾಗವನ್ನು ನೋಡಿ.

## ಪ್ರಾಚೀನ ಪಿಂಗಾಣಿ ವಸ್ತುಗಳು

ಹಿಂದಿನ ಕಾಲದ ಪಿಂಗಾಣಿ ಪದಾರ್ಥಗಳಿಗೆ ನಾನು ತೋರಿಸುವ ಪಕ್ಷಪಾತಬಹುಮಟ್ಟಿಗೆ ಹೆಂಗಸರ ಬಗೆಯದು. ಯಾವುದಾದರೂ ದೊಡ್ಡ

ಬಂಗಲೆಯನ್ನು ನೋಡ ಹೋದಾಗ, ಹಳೆಯ ಪಿಂಗಾಣಿಯನ್ನಿಟ್ಟಿರುವ ಕೋಣೆ ಯಾವುದೆಂದು ಮೊದಲು ಕೇಳುತ್ತೇನೆ; ತರುವಾಯ ಚಿತ್ರಶಾಲೆ ಎಲ್ಲಿದೆಯೆಂದು ಕೇಳುತ್ತೇನೆ. ಯಾವುದು ನನಗೆ ಹೆಚ್ಚು ಇಷ್ಟವೆಂದು ನಾನು ಹೇಳಲಾರೆ; ನಮ್ಮೆಲ್ಲರಲ್ಲಿಯೂ ಒಂದಲ್ಲ ಒಂದು ಅಭಿರುಚಿ ಚಿಕ್ಕವಯಸ್ಸಿನಿಂದ ಬೆನ್ನುಹತ್ತಿ ಬರುವುದರಿಂದ ಅದನ್ನು ನಾವು ಇಂಥ ವರ್ಷದಲ್ಲಿ ಹೊಸದಾಗಿ ಸಂಪಾದನೆ ಮಾಡಿದೆವು ಎಂದು ಹೇಳಲಾಗದು. ನಾನು ಮೊದಲಸಲ ನೋಡಿದ ನಾಟಕ ಮುಂತಾದ ಪ್ರದರ್ಶನಗಳನ್ನು ಇನ್ನೂ ಮರೆತಿಲ್ಲ. ಆದರೆ ನನ್ನ ಭಾವನೆಯೊಳಕ್ಕೆ ಪಿಂಗಾಣಿ ಜಾಡಿಗಳೂ ತಟ್ಟೆಗಳೂ ಯಾವಾಗ ಪ್ರವೇಶಿಸಿದವು ಎಂಬುದು ನನಗೆ ತಿಳಿಯದು.

ನಿನ್ನೆ ಸಾಯಂಕಾಲ ಹೈಸನ್ ಟೀಯನ್ನು ಕುಡಿಯುವಾಗ (ಮಧ್ಯಾಹ್ನದ ಹೊತ್ತು ಮಿಶ್ರವಿಲ್ಲದೆ ಅದನ್ನು ಕುಡಿಯುವಷ್ಟು ಹಳೆಯ ಸಂಪ್ರದಾಯದವರು ನಾವು) ನನ್ನ ಅಕ್ಕನಿಗೆ ತೋರಿಸುತ್ತಿದ್ದೆ. ಏನನ್ನೆಂದರೆ, ಅದ್ಭುತವಾದ ಹಳೆ ಪಿಂಗಾಣಿಗಳನ್ನ: ಈಚೀಚೆಗೆ ಕೊಂಡುವು. ನಾವು ಮೊದಲಸಲ ಉಪಯೋಗಿಸುತ್ತಿದ್ದವು; ಪಿಂಗಾಣಿಯ ಮೇಲಿದ್ದ ಆ ಕೆಲವು ವಿಚಿತ್ರರೀತಿಯ ಚಿತ್ರಗಳನ್ನು ನನ್ನ ಅಕ್ಕನಿಗೆ ತೋರಿಸುತ್ತಿದ್ದೆ. ಕೆಲವು ವರ್ಷಗಳಿಂದೀಚೆಗೆ ಭಾರಿವಸ್ತುಗಳನ್ನು ಕೊಳ್ಳುವಷ್ಟು ಅನುಕೂಲ ನಮಗಿದ್ದರೂ ಅವು ಈ ಬಗೆಯ ಸಣ್ಣ ತಟ್ಟೆಬಟ್ಟಲುಗಳು ಕೊಡುತ್ತಿದ್ದಷ್ಟು ತೃಪ್ತಿ ಸಂತೋಷಗಳನ್ನು ಕೊಡಬಲ್ಲವೆಂದು ಹೇಳಲು ಆಗದೆಹೋಯಿತು—ಆಗ ಕ್ಷಣಿಕವಾದ ಭಾವನೆಯೊಂದು ನನ್ನ ಸಹವಾಸಿಯ ಮುಖದ ಮೇಲೆ ಸುಳಿದಾಡಿ ದುಃಖವನ್ನು ತೋರುವಂತೆ ನನಗೆ ತೋರಿತು. ಅದು ಬೇಸಗೆಯ ಮೋಡದ ಹಾಗೆ. ಸೋದರಿ ಬ್ರಿಜ್ಜೆಟಿಗೆ ಆಗಾಗ ಬರುವ ದುಃಖದ ಮೋಡಗಳನ್ನು ನಾನು ಬಹು ಜಾಗ್ರತೆಯಾಗಿ ಗುರುತಿಸಬಲ್ಲೆ.

"ಪ್ರಿಯವಾದ ಆ ಹಳೆಯಕಾಲ ಮರಳಿ ಬರಲೆಂದು ನನ್ನ ಇಚ್ಛೆ" ಎಂದು ಮೊದಲಾಗಿ ಅವಳು ಹೇಳಿದಳು. "ಆಗ ನಾವು ಶ್ರೀಮಂತರಾಗಿರಲಿಲ್ಲ. ಬಡವಿಯಾಗಿರಲು ಆಸೆಪಡುತ್ತೇನೆಂದು ನನ್ನ ಅರ್ಥವಲ್ಲ. ಆದರೆ ಆಗ ನಾವಿದ್ದುದು ಒಂದು ಮಧ್ಯಮಸ್ಥಿತಿಯಲ್ಲಿ"—ಹೀಗೆ ಅವಳು ಸುಖ

ವಾಗಿ ಹರಟಿದಳು—"ಆ ಸ್ಥಿತಿಯಲ್ಲಿಯೇ ನಮಗೆ ಹೆಚ್ಚು ಸುಖವಿದ್ದಂತೆ ನನಗೆ ಕಾಣುತ್ತದೆ. ಸಂಸಾರಕ್ಕೆ ಸಾಕಾಗಿ ಇನ್ನೂ ಉಳಿಯುವಷ್ಟು ಹಣ ಈಗ ನಿನಗಿರುವುದರಿಂದ ನಮ್ಮ ಜೀವನ ವ್ಯಾಪಾರದಂತೆ ಆಗಿದೆ. ಹಿಂದೆ ಪ್ರತಿಯೊಂದು ಕೆಲಸವೂ ಒಂದೊಂದು ವಿಜಯವಾಗಿತ್ತು! ಆಗ ಅಗ್ಗವಾದ ಸಣ್ಣ ಭೋಗಗಳೂ ಕೂಡ ನಮ್ಮಲ್ಲಿ ಒಂದು ಹೆಬ್ಬಯಕೆಯ ಉತ್ಸಾಹ ವನ್ನು ಹುಟ್ಟಿಸುತ್ತಿದ್ದವು. (ಓ! ಆಗ ನಿನ್ನನ್ನೊಪ್ಪಿಸಲು ನಾನು ಎಷ್ಟು ಹೆಚ್ಚು ಶ್ರಮವಹಿಸಬೇಕಾಗಿತ್ತು!) ಎರಡು ಮೂರುದಿನ ಮುಂಚಿನಿಂದ ಚರ್ಚೆ ಪ್ರಾರಂಭವಾಗುತ್ತಿತ್ತು; ಅನುಕೂಲ ಅನನುಕೂಲಗಳನ್ನು ಖಂಡಿತವಾಗಿ ತೂಕಮಾಡುತ್ತಿದ್ದೆವು; ಯಾವ ಖರ್ಚಿನಲ್ಲಿ ಉಳಿತಾಯ ಮಾಡಬಹುದು, ಬೇಕಾದ ಹಣವನ್ನು ಹೇಗೆ ಉಳಿಸುವುದು ಎಂದು ಯೋಚಿಸುತ್ತಿದ್ದೆವು. ನಾವು ಕೊಡುವ ಹಣಕಾಸಿನ ಬೆಲೆ ತಿಳಿದರೆ, ಆಗ ವಸ್ತುವನ್ನು ಕೊಂಡುಕೊಳ್ಳುವುದರಲ್ಲಿ ಒಂದು ಹೆಮ್ಮೆ!"

ನಿನಗೆ ಜ್ಞಾಪಕವಿದೆಯೆ, ನಿನ್ನ ಆ ಬೂದುಬಣ್ಣದ ಉಡುಪು ನಿನಗೆ ದಗಲೆಯಾಗಿದ್ದುದು, ನಿನ್ನಸ್ನೇಹಿತರು 'ನಾಚಿಕೆಯಿಲ್ಲವೆ' ಎಂದು ನಿನ್ನನ್ನು ಅಣಕಿಸುತ್ತಿದ್ದುದು? ಅದು ಅಷ್ಟು ಜೀರ್ಣವಾಗಿದ್ದಿತು—ಕೊವೆಂಟ್ ಗಾರ್ಡನ್ನಿನ ಬೇಕರನ ಅಂಗಡಿಯಿಂದ ರಾತ್ರಿ ಹೊತ್ತಾದ ಮೇಲೆ ಆ ಬೊಮೆಂಟ್ ಫ್ಲೆಚರ್ ಕವಿಗಳ ದೊಡ್ಡ ಗ್ರಂಥವನ್ನು ಕೊಂಡುದೇ ಇದಕ್ಕೆ ಕಾರಣ. ನಿನಗೆ ನೆನಪಿದೆಯೆ, ನಾವು ಅದನ್ನು ಕೊಳ್ಳ ಬೇಕೆಂದು ಮನಸ್ಸುಮಾಡುವ ಮುಂಚೆ ವಾರಗಟ್ಟಲೆ ಅದರ ಮೇಲೆ ಕಣ್ಣುಹಾಕಿದ್ದು; ಒಂದು ಶನಿವಾರ ರಾತ್ರಿ ಹೊತ್ತು ಮೀರುವವರೆಗೂ ನಿಶ್ಚಯಕ್ಕೆ ಬಾರದೇ ಇದ್ದುದು, ಆಮೇಲೆ ನೀನು ಐಲಿಂಗ್‌ಟನ್ನಿಗೆ ಹೊರಟು ಹೊತ್ತು ಬಹಳ ಮೀರಿರಬಹುದೆಂದು ಹೆದರಿದಾಗ—ಆ ಹಳೆ ಪುಸ್ತಕಗಳ ವ್ಯಾಪಾರಿ, ಗೊಣಗುತ್ತ ಅಂಗಡಿ ಬಾಗಿಲು ತೆರೆದು, ಮಿಣು ಕುವ ಮೇಣಬತ್ತಿಯ ಬೆಳಕಿನಿಂದ (ಆಗ ಅವನು ಮಲಗುವ ಪ್ರಯತ್ನ ದಲ್ಲಿದ್ದ) ಧೂಳು ಕವಿದ ಸಂಪತ್ತಿನ ರಾಶಿಯಿಂದ ಆ ಅಮೂಲ್ಯ ವಸ್ತು ವನ್ನು ಹೊರಕ್ಕೆ ತೆಗೆದಾಗ—ಅದನ್ನು ನೀನು ಕಷ್ಟಬಿದ್ದು ಹೊತ್ತು ಕೊಂಡು ಬಂದು, ಮನೆ ತಲಪಿದ ಮೇಲೆ, ಅದಕ್ಕೆರಡರಷ್ಟು ಭಾರವಿರ ದಾಗಿತ್ತೆ ಎಂದಾಗ,—ಅದನ್ನು ನನಗೆ ಬಹುಮಾನವಾಗಿ ಕೊಟ್ಟಾಗ—

ಅದು ಪೂರ್ತಿಯಾಗಿದೆಯೆ ಎಂದು ಪರೀಕ್ಷೆಮಾಡುವಾಗ—ಕೆಲವು ಕಳಚಿ ಬಿದ್ದ ಹಾಳೆಗಳನ್ನು ಗೋಂದುಹಾಕಿ ನಾನು ಅಂಟಿಸುವಾಗ—ಬೆಳಕು ಹರಿಯುವವರೆಗೂ ಅವನ್ನು ಹಾಗೇ ಬಿಟ್ಟಿರಲು ನಿನಗೆ ಅಸಹನೆಯಾದಾಗ—ಬಡವನಾಗಿರುವುದರಲ್ಲಿ ಸಂತೋಷವಿರಲಿಲ್ಲವೆ? ಅಥವಾ ಈಗ ನೀನು ತೊಟ್ಟಿರುವ ಚೊಕ್ಕಟವಾದ ಆ ಕರಿ ಉಡಿಗೆ, ಈಗ ನಾವು ಸಿರಿವಂತರೂ ಬಹು ನಾಜೂಕಿನವರೂ ಆಗಿರುವುದರಿಂದ ಅದನ್ನು ಬ್ರಷ್ಷಿನಿಂದ ಧೂಳು ಕೊಡವಿ ಬಹು ಎಚ್ಚರಿಕೆಯಿಂದ ಇಡುವೆಯಲ್ಲ ಅದು, ನಿನಗೆ ಹಿಂದಿದ್ದ ಹೆಮ್ಮೆಯಲ್ಲಿ ನಿಜವಾಗಿ ಅರ್ಧವನ್ನಾದರೂ ಹುಟ್ಟಿಸಬಲ್ಲುದೆ? ನಿನ್ನ ಹಳೆ ಉಡುಪನ್ನು ಧರಿಸಿ ಗರ್ವದಿಂದ ಎಲ್ಲರಿಗೂ ಅವನ್ನೇ ತೋರಿಸುತ್ತಿದ್ದೆ—ನಿನ್ನ ಆ ಎಣ್ಣೆ ಹಸುರಿನ ಉಡುಪು—ನ್ಯಾಯವಾಗಿ ತೊಡುವುದಕ್ಕಿಂತ ನಾಲ್ಕೈದು ವಾರ ಹೆಚ್ಚಾಗಿ ತೊಟ್ಟದ್ದು—ಹದಿನೈದು ಷಿಲಿಂಗನ್ನು—ಅಥವಾ ಹದಿನಾರು ಷಿಲಿಂಗೊ—ಪುಸ್ತಕಕ್ಕೆ ಅಷ್ಟು ಹೆಚ್ಚಿನ ಹಣ ಕೊಟ್ಟದ್ದಕ್ಕೆ ನಿನ್ನ ಅಂತಸ್ಸಾಕ್ಷಿಗೆ ಸಮಾಧಾನ ತರಲು ಆ ಹಳೆಬಟ್ಟೆಯನ್ನೇ ಹಾಕಿಕೊಳ್ಳುವ ಪ್ರಾಯಶ್ಚಿತ್ತ—ಆಗ ಅದೇ ನಮಗೆ ಬಹಳ ದೊಡ್ಡದಾಗಿತ್ತು—ನೀನು ಆ ಹಳೇಕಾವ್ಯಕ್ಕೆ ಸುರಿದ ಹಣ. ಈಗ ನಿನಗೆ ಇಷ್ಟ ಬಂದ ಯಾವ ಪುಸ್ತಕವನ್ನಾದರೂ ಕೊಳ್ಳಬಲ್ಲೆ. ಆದರೆ ಹಳೆ ಸಾಮಾನುಗಳನ್ನು ವ್ಯಾಪಾರಮಾಡಿ ನೀನು ನನಗಾಗಿ ತರುವ ಸೊಗಸು ಈಗೆಲ್ಲಿ?

[ಅವಳು ಇದೇ ರೀತಿಯಾಗಿ ಚಿತ್ರಗಳನ್ನು ಕೊಳ್ಳುವುದು, ರಜದಿನಗಳಲ್ಲಿ ಸುಮಾರು ಮುವತ್ತು ಮೈಲಿ ಕಾಲುನಡಿಗೆಯಲ್ಲಿ ಸುತ್ತುತ್ತಿದ್ದುದು, ಷಿಲಿಂಗ್ ಟಿಕೆಟ್ ತೆಗೆದುಕೊಂಡು ಒಳಹೊಕ್ಕು ನಾಟಕ ನೋಡುತ್ತಿದ್ದುದು—ಆ ಸಂದರ್ಭಗಳಲ್ಲಿದ್ದ ಅಪೂರ್ವ ಸಂತೋಷ ಈಗ ಮಾಯವಾಗಿರುವುದನ್ನು ಅವನ ನೆನಪಿಗೆ ತರುವಳು.]

ಸಾಧಾರಣವಾಗಿ ಬ್ರಿಜ್ಜೆಟ್ ಸಂದರ್ಭ ಸಿಕ್ಕಿದಾಗಲೆಲ್ಲ ಮಾತನಾಡುವುದು ಬಹಳ ಕಡಿಮೆ. ಆದ್ದರಿಂದ ಭಾಷಣಮಾಡುವ ಚಿತ್ತವೃತ್ತಿ ಅವಳಿಗೆ

ಬಂದಾಗ, ನಾನು ಅವಳಿಗೆ ಅಡ್ಡಿಬರದಂತೆ ಎಚ್ಚರವಾಗಿರುತ್ತೇನೆ. ನನಗೆ ಬರುವ ಕೇವಲ—ನೂರು ಪೌಂಡುಗಳ ವಾರ್ಷಿಕ ವರಮಾನ ಅವಳ ಭಾವನೆಯಲ್ಲಿ ಮಹಾಐಶ್ವರ್ಯದಂತೆ ಬೋಧೆಯಾಗಿರುವುದನ್ನು ನೋಡಿ ನನಗೆ ತಡೆಯಲಾರದ ಕಿರುನಗೆ ಬಂತು; 'ಅಕ್ಕ, ನಾವು ಹೆಚ್ಚು ಬಡವರಾಗಿದ್ದಾಗ ಹೆಚ್ಚು ಸುಖಿಗಳಾಗಿದ್ದೆವು, ನಿಜ. ಆದರೆ ನಾವು ಯುವಕರಾಗಿಯೂ ಇದ್ದೆವು. ಅದಿರಲಿ; ಈಗ ನಮ್ಮಲ್ಲಿರುವ ಹೆಚ್ಚು ಹಣವನ್ನು ಹತ್ತಿರ ಇಟ್ಟುಕೊಳ್ಳಲೇಬೇಕೆಂದು ಕಾಣುತ್ತದೆ; ಅದನ್ನು ಸಮುದ್ರಕ್ಕೆ ಬಿಸಾಡಿದರೆ, ನಮ್ಮ ಸ್ಥಿತಿ ನೆಟ್ಟಗಾಗುವುದರಲ್ಲಿ ನನಗೆ ಸಂದೇಹ. ನಾವು ಒಟ್ಟಿಗೆ ಬೆಳೆಯುತ್ತ ಕಷ್ಟಪರಂಪರೆಗಳೊಡನೆ ಹೋರಾಡಬೇಕಾಯಿತು; ನಮ್ಮಲ್ಲಿನ ಪರಸ್ಪರ ಕೃತಜ್ಞತೆಗೆ ಅದೇ ದೃಢವಾದ ಕಾರಣವಾಯಿತು. ಅದು ನಮಗೆ ಶಕ್ತಿಯನ್ನು ಕೊಟ್ಟಿತು. ನಮ್ಮಿಬ್ಬರನ್ನು ಹೆಚ್ಚು ಸ್ನೇಹದಿಂದಿರುವಂತೆ ಕೂಡಿಸಿತು. ಈಗ ನೀನು ದೂರುತ್ತಿದ್ದೀಯಲ್ಲ ಆ ಸಮೃದ್ಧಿ ಮೊದಲಿನಿಂದಿದ್ದರೆ, ಈಗಿನವರಿಗೆ ಅನ್ಯೋನ್ಯವಾಗಿ ನಾವಿದ್ದಂತೆ ಇರುವುದು ಸಾಧ್ಯವಾಗುತ್ತಿರಲಿಲ್ಲ. ಕಷ್ಟಸಹಿಷ್ಣುತೆ—ಯೌವನಕ್ಕೆ ಸಹಜವಾದ, ಬಾಹ್ಯ ಸಂಘಟನೆಗಳಿಗೆ ಮೀರಿದ, ಸಂತೋಷ—ಎಲ್ಲವೂ ನಮ್ಮನ್ನು ಬಿಟ್ಟು ಬಹಳ ಕಾಲವಾಗಿದೆ. ಮುಪ್ಪಿಗೆ ಎರಡನೆಯ ಯೌವನ ಕೊಡುವುದು ಹಣವೆ. ಹಿಂದಿನಷ್ಟು ಸೌಖ್ಯ ನಮಗೆ ಲಭಿಸದಿದ್ದರೂ ಈಗ ಎಷ್ಟು ದೊರೆಯಬಹುದೋ ಅಷ್ಟಕ್ಕೆಲ್ಲ ಅದೇ ಕಾರಣ. ಹಿಂದೆ ನಡೆದುಹೋಗುತ್ತಿದ್ದ ಕಡೆ ಈಗ ಕುದುರೆ ಗಾಡಿಯಲ್ಲಿ ಹೋಗಬೇಕು—ಚೆನ್ನಾಗಿ ಬಾಳಬೇಕು—ಮೆತ್ತನೆಯ ಹಾಸಿಗೆಯಲ್ಲಿ ಮಲಗಬೇಕು—ಹಾಗೆ ಮಾಡುವುದು ವಿವೇಕ—ನೀನು ಹೇಳುವ ದಿನಗಳಲ್ಲಿದ್ದ ಅನುಕೂಲಗಳಿಗಿಂತ ಹೆಚ್ಚು ಅನುಕೂಲ ಕಲ್ಪಿಸಿಕೊಳ್ಳಬೇಕು. ಆದರೂ ಆ ಹಳೆಯ ದಿವಸಗಳು ಹಿಂದಿರುಗಿ ಬರುವುದಾದರೆ—ನೀನೂ ನಾನೂ ದಿನಕ್ಕೆ ಮೂವತ್ತು ಮೈಲಿ ನಡೆಯಬಹುದಾದರೆ—ಬ್ಯಾರಿಸ್ಟರ್ ಮತ್ತು ಮಿಸೆಸ್ ಬ್ಲ್ಯಾಂಡ್ ಪುನಃ ಯುವಕರಾದರೆ—ಷಿಲಿಂಗಿನ ಗ್ಯಾಲರಿ ದಿನಗಳು ಹಿಂದಿರುಗಿ ಬರುವುದಾದರೆ—ಅಕ್ಕ, ಈಗ ಅವೆಲ್ಲ ಸ್ವಪ್ನಗಳು!—ನಾನೂ ನೀನೂ ಈ ಕ್ಷಣದಲ್ಲಿ ಹೀಗೆ ಸಮಾಧಾನದಿಂದ ವಾದಿಸುವುದನ್ನು ಬಿಟ್ಟು, ಬೆಂಕಿಮುಂದೆ ಬೆಚ್ಚಗೆ ಸುಖವಾದ ಮೆತ್ತನೆಯ ಸೋಫಾದಲ್ಲಿ ಕುಳಿತಿರುವ ಬದಲು—ಪುನಃ ಅನುಕೂಲ ಕಡಿಮೆಯಾದ ಆ ಹಂತಗಳನ್ನು ಹತ್ತುತ್ತ, ತಳ್ಳಿಸಿಕೊಂಡು, ಜನಗಳ ಮಧ್ಯೆ ನೆಗ್ಗಿಸಿಕೊಂಡು, ಗ್ಯಾಲರಿಗೆ ನುಗ್ಗುವ ಬಡಜನರ ತೋಳಿ

ನಿಂದ ತಳ್ಳಿಸಿಕೊಳ್ಳುತ್ತಿದ್ದರೆ—ನಿನ್ನ ಭಯೋತ್ಪಾದಕವಾದ ಆ ಕೂಗು ಪುನಃ ಕೇಳಿಸುವುದಾದರೆ—'ದೇವರಿಗೆ ನಮಸ್ಕಾರ, ನಾವು ಸುರಕ್ಷಿತರಾಗಿದ್ದೇವೆ'—ಎನ್ನುವ ಸಿಹಿಮಾತು, ನಾವು ಕಡೆಯ ಹಂತವನ್ನು ಸಾಧಿಸಿ, ನಮ್ಮ ಕೆಳಗಿರುವ ಸಂತೋಷಪೂರಿತವಾದ ನಾಟಕರಂಗದ ಮೊದಲ ಬೆಳಕು ಕಾಣಿಸುವಾಗ ಬರುವುದಾದರೆ—ಆ ಸೌಖ್ಯವನ್ನು ಕೊಳ್ಳುವುದಕ್ಕಾಗಿ ಒಬ್ಬ ಕೋಟ್ಯಾಧೀಶ್ವರನಿಗೆ ಇದ್ದಿತೆಂದು ಹೇಳುವ ಐಶ್ವರ್ಯಕ್ಕಿಂತಲೂ ಹೆಚ್ಚಿನ ಹಣವನ್ನು ಅಳೆಯಲಾಗದಷ್ಟು ಆಳದ ಸಮುದ್ರದಲ್ಲಿ ಹಾಕಿಬಿಡುತ್ತೇನೆ.

ಲ್ಯಾಂಬನ ಪ್ರಬಂಧಗಳಿಗೆ "ಎಲಿಯನ ಪ್ರಬಂಧ"ಗಳೆಂದು ಹೆಸರು. ಪ್ರತಿಯೊಂದೂ ಸ್ವಾರಸ್ಯಮಯವಾಗಿದೆ. "ಎರಡು ಮಾನವ ಜನಾಂಗಗಳು"; "ಯುಗಾದಿಯ (ಹೊಸ ವರ್ಷದ) ಹಿಂದಿನ ಸಾಯಂಕಾಲ"; "ಅಖಿಲ ಮೂರ್ಖರ ಜಯಂತಿ"; "ನನ್ನ ಬಂಧುವರ್ಗ"; "ಸ್ಕೂಲು ಉಪಾಧ್ಯಾಯರು—ಹಳೇ ಜಾತಿ, ಹೊಸ ಜಾತಿ"; "ನನ್ನ ಮೊದಲ ನಾಟಕ"; "ಸ್ವಪ್ನದ ಮಕ್ಕಳು"; "ಸೂಕರ ಪಾಕವನ್ನು ಕುರಿತು ಒಂದು ಶಾಸ್ತ್ರೀಯ ಪ್ರಬಂಧ"; "ಬಡನೆಂಟರು"; "ಮದುವೆಯಾದವರ ಮೇಲೆ ಬ್ರಹ್ಮಚಾರಿಯ ದೂರು"; ಇತ್ಯಾದಿ ಐವತ್ತೆರಡು ಪ್ರಬಂಧಗಳಿವೆ. ಚಾರಲ್ಸ್ ಲ್ಯಾಂಬಿಗೆ ಸುಂಕದ ಕಚೇರಿಯಲ್ಲಿ ಗುಮಾಸ್ತೆ ಕೆಲಸವಿತ್ತು. ಅಕ್ಕನಿಗೆ ಆಗಾಗ ಹುಚ್ಚು ಕೆರಳುತ್ತಿದ್ದುದರಿಂದ ತನ್ನ ಜೀವನವನ್ನು ಅವಳ ರಕ್ಷಣೆಗೆ ಮುಡಿಪಾಗಿಟ್ಟು ಬ್ರಹ್ಮಚಾರಿಯಾಗಿ ಬಾಳಿದನು. ಸಂಸಾರದ ಬೇಗೆ ಹೇಗಿದ್ದರೂ ಆತನ ಪರಿಪಕ್ವವಾದ ಆತ್ಮದ ಸೋಂಕಿನಿಂದ ಎಲ್ಲ ದುಃಖವೂ ತನ್ನ ತಾಪವನ್ನು ನೀಗಿಕೊಂಡು ಸಹ್ಯವೆನಿಸಿತು. ಅವನ ಲೇಖದಲ್ಲಿ ಯಾವ ವಿಧವಾದ ನೋವಿನ ಛಾಯೆಯೂ ಕಾಣಬರುವುದಿಲ್ಲ. ತಿಳಿಯಾದ,

ಸೂಕ್ಷ್ಮವಾದ, ರಂಜಕವಾದ, ಹಾಸ್ಯವಿಶಿಷ್ಟವಾದ ವಿಲಕ್ಷಣ ಮನೋದೃಷ್ಟಿಗಳೇ ತುಂಬಿಕೊಂಡಿವೆ. ಜೊತೆಗೆ ಶುದ್ಧವಾದ ಕರುಣರಸದ ಪ್ರಸಾದವೂ ಇದೆ. ಲ್ಯಾಂಬನ್ನು ಯಾರೂ ಅನುಕರಣಮಾಡಿ ದಕ್ಕಿಸಿಕೊಳ್ಳಲಾರರು. ಅವನ ವೈಲಕ್ಷಣ ಅವನದೇ.

---

## ೧೦. ವಿಲಿಯಂ ಹ್ಯಾಸ್ಲಿಟ್

ಇದೇ ಕಾಲಕ್ಕೆ ಸೇರಿದವನು ಲೀ ಹಂಟ್. ಲ್ಯಾಂಬಿನಂತೆ ಗುಮಾಸ್ತನಾಗಿದ್ದವನು ಆ ಕೆಲಸವನ್ನು ಬಿಟ್ಟುಬಿಟ್ಟು ಸಾಹಿತ್ಯದಿಂದಲೇ ಜೀವನ ಸಂಪಾದನೆ ಮಾಡಿಕೊಳ್ಳ ಬಯಸಿ "ಎಕ್ಸಾಮಿನರ್" ಎಂಬ ಪತ್ರಿಕೆಯನ್ನು ಹೊರಡಿಸಿ ಹಲವು ಕಾಲ ಕಷ್ಟಪಟ್ಟು ದುಡಿದನು. ಸಾಹಿತ್ಯವಿಮರ್ಶೆಯ ಪ್ರಬಂಧಗಳೊಡನೆ ಸ್ವವಿಷಯವಾದ ಲಲಿತಪ್ರಬಂಧಗಳನ್ನೂ ಬರೆದನು. ಆದರೆ ಇವನಲ್ಲಿ ಗಹನವಾದ ಭಾವನೆಗಳಿರಲಿಲ್ಲ. ದೊಡ್ಡ ಪ್ರಬಂಧಕಾರರ ಗುಂಪಿಗೆ ಸೇರಿದವನೆಂದರೆ ವಿಲಿಯಮ್ ಹ್ಯಾಸ್ಲಿಟ್. ಇವನಲ್ಲಿ ಜಗಳಗಂಟಿಗತನ ಹೆಚ್ಚು. ಇವನಿಗೆ ಸಂಸಾರದಲ್ಲಿ ಹಿತವಿರಲಿಲ್ಲ. ಅದು ಅಲಕ್ಷ್ಯ ವೈಷಮ್ಯಗಳಿಂದ ಅಸಹ್ಯವಾಗಿತ್ತು. ಆದ್ದರಿಂದಲೇ ಇವನ ಪ್ರಬಂಧಗಳಲ್ಲಿ ವಿಮರ್ಶಾತ್ಮಕವಾದವು ಉತ್ತಮ ತರಗತಿಗೆ ಸೇರಿದಂಥವಾದವು. ಪಕ್ಷಪಾತ ತಲೆಹಾಕಿದ ಪ್ರಬಂಧಗಳು ಕಡಮೆ ದರ್ಜೆ

ಯುವು. ಅದರೂ ಇವನ ಶೈಲಿ ಗಂಡುಶೈಲಿ. ಅದರ ಧೋರಣೆ, ಸ್ವಪ್ರತಿಷ್ಠೆ, ದಿಟ್ಟತನ ಇತರರಲ್ಲಿ ಕಾಣಬರುವುದಿಲ್ಲ. ಪ್ರಸಿದ್ಧ ಕವಿಯಾದ ಆರ್. ಎಲ್. ಸ್ಟೀವನ್‌ಸನ್ ಹೇಳಿದನಂತೆ "ನಾವೆಲ್ಲ ಚೆನ್ನಾಗಿಯೆ ಬರೆಯುತ್ತೇವೆ. ಆದರೆ ಯಾರೊಬ್ಬರೂ ಹ್ಯಾಸ್ಲಿಟ್ಟನಂತೆ ಬರೆಯಲಾರೆವು." ಹ್ಯಾಸ್ಲಿಟ್ ಈ ಪ್ರಬಂಧ ವನ್ನು ಆರಂಭಿಸುವ ರೀತಿಯನ್ನು ಭಾವಿಸಿ:

## ಪ್ರಬಂಧಗಳನ್ನು ಬರೆಯುವುದಕ್ಕೆ ಕಡೆಯ ನಮಸ್ಕಾರ

'ಶಾಂತಿಮಯಜೀವನ ಉತ್ತಮವಾದರೆ, ಈ ಜೀವನ ಉತ್ತಮ': ಆಹಾರ, ಬೆಚ್ಚನೆಯ ಸ್ಥಳ, ನಿದ್ದೆ, ಒಂದು ಪುಸ್ತಕ; ಈಗ ನಾನು ಕೇಳು ವುದು ಇಷ್ಟನ್ನೇ; ಅಲೆದಾಡುತ್ತಿರುವ ನನ್ನ ಆಸೆಗಳ ಕೊನೆ ಅದು. ಯಾವ ಒಡನಾಡಿಯೂ

'ಓರ್ವ ಮಿತ್ರ, ನಿನ್ನ ವಿಶ್ರಾಂತಿಯಲಿ
ಕಿವಿಯಲುಸಿರಲು ಏಕಾಂತದಸವಿಯ'

ನಿನಗೆ ಬೇಡವೇ ಎಂದು ಕೇಳಿದರೆ, ನನ್ನ ಉತ್ತರ ಇದು : ಮಿತ್ರ ಬರಲಿರುವನೆಂಬ ನಿರೀಕ್ಷಣೆ ಒಳ್ಳೆಯದು; ಅವನು ತೊಲಗಿಹೋಗಿದ್ದರೆ, ಇನ್ನೂ ಮೇಲು. ಹೆಂಡತಿಯೂ ಬೇಡವೊ? ಅದೊಂದು ಸುಂದರವಾದ ಮುಖವಾಡ! ಅದನ್ನು ನಾನು ಬಲ್ಲೆ! ಮುಖದಿಂದ ಹೃದಯವನ್ನು, ತುಟಿಗಳಿಂದ ಅಂತರಂಗವನ್ನು ತಿಳಿಯಬಲ್ಲೆನಾದರೆ ಆಗ ಹೆಂಗಸನ್ನು ಪುನಃ ನಂಬುವೆನು. ಇವರ ಬದಲು ನನಗೆ ಕೆಂಪುಕುತ್ತಿಗೆಯ ಗುಬ್ಬಚ್ಚಿ ಯನ್ನು ಕೊಡಿ, ಬಾಗಿಲ ಮುಂದೆ ಆಹಾರದ ಚೂರನ್ನಾರಿಸುತ್ತಿರಲಿ, ಅಥವಾ ಎಲೆಯುದರಿ ಬರಿಯದಾಗಿರುವ ಮರದ ರೆಂಬೆಯಲ್ಲಿ ಕುಳಿತು ಹಾಡುತ್ತಿರಲಿ; ಹೋದೆಡೆಯಲ್ಲೆಲ್ಲ ನನ್ನನ್ನು ಹಿಂಬಾಲಿಸಿ ಒಂದು ಕ್ಷಣ ದಲ್ಲಿ ಅದೃಶ್ಯವಾಗುವ ರೂಪು ಅದು; 'ಅದು ಕಿನ್ನರರ ಕೆಲಸವನ್ನು ಸಂತೋಷದಿಂದ ಮಾಡುವುದು'; ಅಥವಾ ನನ್ನ ಕಿವಿಗೆ ಬೀಳಲಿ— ಮಾಗಿಯ ಕಿವಿಯನ್ನು ಬೆಚ್ಚಿಸುವ 'ಥ್ರಷ್ ಹಕ್ಕಿಯ ತುಂಬು ಹಾಡು

ಗಳು—ವೈದೃಶ್ಯದ ತಿಳಿವಿನಿಂದಲೇ ಸಂತೋಷವನ್ನು ಮನದಣಿಯ ಹೀರಿರುವಂತೆ ತೋರಿಸುವ ಹಾಡುಗಳು.' ನಾನು ಬಲವಾಗಿ ಅಂಟಿ ಕೊಂಡಿರುವುದು ಇಂಥಾ ವಿಷಯಗಳಿಗೆ; ಅವೇ ನನಗೆಸತ್ಯ;ಅವುಗಳ ಗುಣ ಗಳಿಂದಲೇ ಪ್ರಿಯವಾಗಿವೆ; ಅಂದರೆ ಯಾವುದು ನನ್ನಿಂದ ದೂರಹೋಗಿ ರುವುದೋ ಅದರ ಸಲುವಾಗಿ ಅವು ಹೆಚ್ಚು ಇಷ್ಟವಾಗಿವೆ; ಆ ಸ್ವಪ್ನ ಪ್ರಪಂಚಕ್ಕೆ ನನ್ನನ್ನು ಹಿಂದಿರುಗಿ ಒಯ್ಯುತ್ತಿರುವುವು; ಒಂದಾನೊಂದು ಕಾಲದಲ್ಲಿ ಪ್ರಪಂಚ ನಿರ್ಮಲವೆಂದು ತೋರಿ ನನ್ನ ಜೀವನ ಸಂಗೀತ ದಂತೆ ರಮ್ಯವಾಗಿ ನನ್ನ ಹೃದಯ ಮಿಡಿಯುತ್ತಿತ್ತು. ಆದರೆ ಈಗ 'ಮನ ಸ್ಸುಗಳ ಅನ್ಯೋನ್ಯದಿಂದ ಹುಟ್ಟುವ ತೃಪ್ತಿ ಹಿಂಗಿಹೋಗಿದೆ;' ನನ್ನನ್ನು ಮೋಸಗೊಳಿಸದ ಪ್ರಪಂಚದಿಂದ ಬೇರೆ ಹೋಗಿ ಪ್ರಕೃತಿಯನ್ನು ಆಶ್ರ ಯಿಸುವೆನು; ಪ್ರಪಂಚಕ್ಕೆ ಇರುವ ಅಲ್ಪಸ್ವಲ್ಪ ಪ್ರಾಮಾಣಿಕವಾದ ಸೌಂದ ರ್ಯವೂ ಪ್ರಕೃತಿಯಿಂದ ದತ್ತವಾದುದೇ, ಅಳಿದ ಸಂವತ್ಸರಗಳ ಮೇಲೆ ಮಾಯೆ ಹರಡಿರುವುದೂ ಅದರಿಂದಲೇ.

ಈ ನಾಲ್ಕಾರು ವಾಕ್ಯಗಳನ್ನು ಬರೆಯುವುದರಲ್ಲಿಯೇ ಷೇಕ್ಸ್‌ಪಿಯರ್, ಮಿಲ್ಟನ್, ಕೂಪರ್ ಕವಿಗಳ ಮಾತು ಹ್ಯಾಸ್ಲಿಟ್ಟನ ವಾಕ್ಯಸರಣಿಯಲ್ಲಿ ಸೇರಿಹೋಗಿವೆ. ದೊಡ್ಡ ಕವಿಗಳ ಕಾವ್ಯಗಳು ನಮ್ಮದಾಗಿ ಪರಿಣಮಿಸಿದರೆ ಆಗ ಅವರ ಮಾತು ನಮ್ಮ ಸಂಭಾಷಣೆ ಮತ್ತು ಲೇಖನಗಳಲ್ಲಿ ನಮ್ಮ ಪ್ರಯತ್ನವಿಲ್ಲದೆ ಸ್ವಾಭಾವಿಕವಾಗಿಯೇ ಸೇರಿಕೊಂಡು ಬರು ವುದು ಸಹಜ. ಈ ಲಕ್ಷಣ ಹ್ಯಾಸ್ಲಿಟ್ ಕವಿಯ ಒಂದು ಮುಖ್ಯ ಲಕ್ಷಣ. ಇನ್ನೊಂದು ಪ್ರಬಂಧ ಆರಂಭವಾಗುವ ರೀತಿಯನ್ನು ನೋಡಿ.

## ಹಳೆ ಪುಸ್ತಕಗಳನ್ನೋದುವುದು

ನನಗೆ ಹೊಸಪುಸ್ತಕಗಳನೋದುವುದು ಬೇಕಿಲ್ಲ. ಪುನಃ ಪುನಃ ನಾನು ಓದಿರುವ ಪುಸ್ತಕಗಳು ಸುಮಾರು ಇಪ್ಪತ್ತು ಮೂವತ್ತು ಇವೆ.

ನನಗೆ ಓದುವ ಆಸೆ ಇರುವುದು ಅವನ್ನು ಕುರಿತು ಮಾತ್ರವೇ. "Tales of My Land Lord" (ಹೊಟೇಲು ಯಜಮಾನನ ಕಥೆಗಳು) ಪುಸ್ತಕವನ್ನು ಓದಲು ಕುಳಿತುಕೊಳ್ಳುವಂತೆ ಮನಸ್ಸನ್ನೊಡಂಬಡಿಸಲು ನನಗೆ ಬಹಳಕಾಲ ಹಿಡಿಯಿತು. ಆದರೆ ಈಗ ನನ್ನ ಸಣ್ಣಪುಸ್ತಕ ಭಂಡಾರಕ್ಕೆ ಆ ಗ್ರಂಥಕರ್ತನ ಪುಸ್ತಕಗಳು ಸೇರಿ ಅದನ್ನು ವೃದ್ಧಿ ಮಾಡಿದೆ. ಲೇಡಿ ಮಾರ್ಗನ್ನಳ ಕೆಲವು ಪುಸ್ತಕಗಳು ಒಳ್ಳೆಯವೆಂದು ನಾನು ಕೇಳಿದ್ದೇನೆ; ಅನಾಸ್ಟೇಸಿಯಸ್ಸನ್ನು ಓದುವಂತೆ ನನಗೆ ಸಿಫಾರಸು ಮಾಡಿದ್ದಾರೆ; ಆದರೆ ಆ ಉದ್ಯಮವನ್ನು ಕೈಗೊಳ್ಳಲು ನಾನು ಇನ್ನೂ ಧೈರ್ಯಮಾಡಿಲ್ಲ. ಒಬ್ಬ ಮಹಿಳೆಗೆ ಸ್ನೇಹಿತನೊಬ್ಬ 'ಡೆಲ್ಫಿನೆ' ಎಂಬ ಕಾವ್ಯವನ್ನು ಓದುತ್ತಿದ್ದೇನೆಂದು ಹೇಳಿದಾಗ ಅವಳು ಆಶ್ಚರ್ಯವನ್ನು ಬಹಿರಂಗಪಡಿಸದೇ ಇರಲು ಸಾಧ್ಯವಾಗಲಿಲ್ಲ—ಆ ಪುಸ್ತಕ ಸ್ವಲ್ಪ ಕಾಲದ ಕೆಳಗೆ ಪ್ರಕಟವಾಯಿತಲ್ಲವೆ ಎಂದು ಕೇಳಿದಳು. ಹೆಂಗಸರು ಪುಸ್ತಕಗಳಿಗೆ ಬೆಲೆಕಟ್ಟುವುದು ಹೀಗೆಯೇ; ಹೊಸದರಲ್ಲಿ ಮೆಚ್ಚಲ್ಪಡುವ ಸಂಪ್ರದಾಯಗಳಿಗೆ ಅಥವಾ ಮುಖಸೌಂದರ್ಯಕ್ಕೆ ಬೆಲೆಕಟ್ಟುವಂತೆ. ಅದು ನನ್ನ ರೀತಿಯಲ್ಲ. ಮನೆಮನೆಗೆ ಒಯ್ಯುವ ಹೊಸ ಪುಸ್ತಕಗಳ ಭಂಡಾರಗಳಿಗೆ ಹೆಚ್ಚು ಕಷ್ಟ ಕೊಡುವವರಲ್ಲಿ ನಾನೊಬ್ಬನಲ್ಲ; ಮತ್ತು ಮಾಸಪತ್ರಿಕೆ, ಪಕ್ಷಪತ್ರಿಕೆಗಳ ಮೇಲ್ ಪತ್ರಿಕೆಗಳಿಗಾಗಿ ಹಾತೊರೆದು ಪುಸ್ತಕವ್ಯಾಪಾರಿಗಳನ್ನು ಹಿಂಸಿಸುವವರಲ್ಲಿಯೂ ನಾನೊಬ್ಬನಲ್ಲ. ಕಪ್ಪು ಅಕ್ಷರಕ್ಕೆ ಅತಿಯಾಗಿ ಮೋಹಗೊಂಡವನೆಂದೂ ಹೇಳಲಾರೆ.

ಗ್ರಂಥಕರ್ತನು ಸತ್ತ ಒಂದೆರಡು ತಲೆಮಾರಿನ ಮೇಲೆಯೂ ಉಳಿದಿರುವ ಪುಸ್ತಕ ಕೆಟ್ಟದೆಂಬ ಭಾವನೆ ನನ್ನಲ್ಲಿಲ್ಲ. ಜೀವಂತರಾಗಿರುವವರಲ್ಲಿ ಇರುವುದಕ್ಕಿಂತ ಸತ್ತವರಲ್ಲಿ ನನಗೆ ನಂಬಿಕೆ ಹೆಚ್ಚು. ಸಮಕಾಲೀನರಾದ ಲೇಖಕರನ್ನು ಎರಡು ಪಂಗಡವಾಗಿ ವಿಂಗಡಿಸಬಹುದು—ಸ್ನೇಹಿತರು, ಶತ್ರುಗಳು. ಮೊದಲನೆಯವರನ್ನು ಕುರಿತು ಒಳ್ಳೆಯ ಯೋಚನೆಮಾಡುವ ನಿರ್ಬಂಧಕ್ಕೆ ಒಳಗಾಗುತ್ತೇವೆ; ಎರಡನೆಯ ಪಂಗಡದವರನ್ನು ಕುರಿತು ತೀರ ಕೆಟ್ಟದನ್ನು ಯೋಚನೆಮಾಡುವುದೇ ನಮ್ಮ ಸ್ವಭಾವ. ಹೀಗಾಗಿ ಅವರ ಪುಸ್ತಕಗಳ ಪಠನದಿಂದ ನೈಜವಾದ ಸಂತೋಷ ಹುಟ್ಟಲವಕಾಶವಿಲ್ಲ.

ಇವನ ಇನ್ನು ಕೆಲವು ಪ್ರಬಂಧಗಳ ಹೆಸರು ನೋಡಿದರೆ

ಇವನ ಮನೋಧರ್ಮ ಯಾವ ಬಗೆಯಾದುದ್ದೆಂಬುದು ತಿಳಿಯು ತ್ತದೆ. "ಮಹಾಪ್ರತಿಭಾಶಾಲಿಗೆ ತನ್ನ ಶಕ್ತಿ ತಿಳಿದಿರುವುದೆ?"; "ಪಂಡಿತರ ಅಜ್ಞಾನ"; "ದೂರದ ವಸ್ತು ಏಕೆ ಸಂತೋಷ ವನ್ನುಂಟುಮಾಡುತ್ತದೆ"; "ಅತಿ ಬುದ್ಧಿವಂತಿಕೆಯ ಅನಾನು ಕೂಲಗಳು"; "ಸಾವಿನ ಹೆದರಿಕೆ"; "ಉಪಕಾರ ಬುದ್ಧಿ"; "ಅಪ್ರಿಯರಾದ ಜನರು". ಡಿಕ್ವಿನ್ಸಿ, ಲ್ಯಾಂಡರ್, ಕಾಬೆಟ್— ಈ ಮೂವರೂ ಹೀಗೆಯೇ ದೊಡ್ಡ ಪ್ರಬಂಧಕಾರರ ಗುಂಪಿಗೆ ಸೇರಿದವರು.

---

## ೧೧. ಕಾಬೆಟ್

ಡಿಕ್ವಿನ್ಸಿಯ ಶೈಲಿ ಬಹಳ ಆಡಂಬರದ ಶೈಲಿ. ಕೆಲವು ಉತ್ತಮ ತರಗತಿಗೆ ಸೇರಿದವು. "ಅಫೀಮು ತಿಂದವನ ಒಪ್ಪಿಕೆ" ಎನ್ನುವ ಕಾವ್ಯ, ಒಂದೇ ವಿಷಯಾತ್ಮಕವಾದ ಅನೇಕ ಪ್ರಬಂಧಗಳ ಸರಣಿಯಂತಿದೆ. ಲ್ಯಾಂಡರಿನ ಮುಖ್ಯ ಬರ ವಣಿಗೆ—ಈಗ ಎಲ್ಲರೂ ಓದುವಂಥದ್ದು—ಇನ್ನೊಂದು ರೂಪ ವನ್ನು ಹೊಂದಿ, ಕಾಲ್ಪನಿಕ ಸಂಭಾಷಣೆಗಳಾಗಿ ಪರಿಣಮಿಸಿತು. ಕಾಬೆಟ್ ಒಬ್ಬ ರೈತನ ಮಗ, ಅಮೆರಿಕದ ಸೈನ್ಯದಲ್ಲಿ ಸಿಪಾಯಿ ಕೆಲಸದಲ್ಲಿದ್ದು ಅನೇಕ ವಿಷಯಗಳ ಮೇಲೆ ಪ್ರಬಂಧ ಬರೆದ. ಅವುಗಳಲ್ಲಿ ಕೆಲವು ಬಹಳ ಚೆನ್ನಾಗಿವೆ. ಮುಖ್ಯವಾಗಿ ಅವನ ಶೈಲಿ ಸರಳವಾದದ್ದು; ಜನಸಾಮಾನ್ಯರ ಮನಸ್ಸಿಗೂ ಹಿಡಿಯು ವಂತೆ ವಿಷಯವನ್ನು ಸುಲಭವಾಗಿ ತಿಳಿಸುವುದು. ಈ ಒಂದು ಉದಾಹರಣೆ ಸಾಕು.

## ಆಹಾರ ಮತ್ತು ನೀತಿ

ಒಂದು ಸಂಸಾರ ಸುಖವಾಗಿರಬೇಕಾದರೆ ಅವರಿಗೆ ಸಾಕಾಗುವಷ್ಟು ಅನ್ನಬಟ್ಟೆಗಳನ್ನು ಒದಗಿಸಬೇಕು ಎನ್ನುವುದು ನಾನು ಹೇಳುವ ಮೊದಲ ಸೂತ್ರ. ಜೀವನಕ್ಕೆ ಆವಶ್ಯಕವಾದ ವಸ್ತುಗಳಿಲ್ಲದೆಯೇ ಸುಖವಾಗಿರಬಹುದು ಎಂದು ತಮ್ಮನ್ನು ತಾವೇ ಆಗಲಿ ಅಥವಾ ಇತರರನ್ನೇ ಆಗಲಿ ತಪ್ಪಿಸಲು ಜನ ಮಾಡುವ ಪ್ರಯತ್ನ ವ್ಯರ್ಥ. ಅತಿ ಆವೇಶದಿಂದ ಉಪದೇಶಮಾಡುವ ಆದರ್ಶಗಳು ಬಡತನದಲ್ಲಿಯೇ ತೃಪ್ತಿ ಹೊಂದಬೇಕೆಂದು ಹೇಳಿ ಕೊಡುವುವು; ಅವುಗಳಿಂದ ಪರಿಣಾಮ ಕೆಡುವುದು. ಅವುಗಳ ಉದ್ದೇಶ ವಿಧೇಯರಾದ ಗುಲಾಮರನ್ನೊದಗಿಸಿಕೊಟ್ಟು ಕ್ರೂರಿಗಳಾದ ಅಧಿಕಾರಿಗಳಿಗೆ ಅನುಕೂಲ ಮಾಡುವುದು. ಚೆನ್ನಾಗಿ ಬದುಕುವುದೂ ಜೀವನದಲ್ಲಿ ಸಂತೋಷವನ್ನುಂಟುಮಾಡುವ ಎಲ್ಲ ವಸ್ತುಗಳನ್ನು ಅನುಭವಿಸುವುದೂ ಶಾಸನಕ್ಕನುಸಾರವಾಗಿ ವಿವೇಕದಿಂದ ತನ್ನ ಶಕ್ತಿಯನ್ನುಪಯೋಗಿಸಬಲ್ಲ ಪ್ರತಿಯೊಬ್ಬ ಮನುಷ್ಯನ ಹಕ್ಕು. ಮನುಷ್ಯನ ಶ್ರಮದಿಂದ ಹುಟ್ಟಿದ ಈ ಸಮೃದ್ಧಿಯ ಮಧ್ಯದಲ್ಲಿದ್ದೂ ದುಃಖಪೀಡಿತರಾಗಿ, ಹಸಿವು ದಾಹಗಳಿಂದ ಸಂಕಟಪಟ್ಟು ಚಳಿಯಲ್ಲಿ ಸಾಯುವುದಕ್ಕಾಗಿ ದೇವರು ನಮ್ಮನ್ನು ಹುಟ್ಟಿಸಿರುವನೆಂದು ಭಾವಿಸಿದರೆ ಅದು ದೇವರನ್ನು ದೂಷಿಸಿದ ಹಾಗೆಯೇ. ಸುಖಮಯವಾದ ಬಡತನವನ್ನು ಹೊಗಳುವುದು ಈಗಿನ ಸಂಪ್ರದಾಯವಾದರೂ ನಾನು ಅದನ್ನು ಹೊಗಳುವುದಿಲ್ಲ. ಅದರ ಬದಲು ಬಡವನಾಗಿದ್ದೂ ತೃಪ್ತನಾಗಿದ್ದರೆ ಅಂಥಾ ಮನುಷ್ಯನನ್ನು ನಾನು ತಿರಸ್ಕಾರದಿಂದ ನೋಡುತ್ತೇನೆ. ಏಕೆಂದರೆ ಈ ಬಗೆಯ ತೃಪ್ತಿ ಕೀಳು ಸ್ವಭಾವದ ಲಕ್ಷಣ; ಈ ಸ್ವಭಾವ ಉದ್ಯಮ, ಉದ್ಯೋಗ, ಸ್ವಾತಂತ್ರ್ಯ ಪ್ರೇಮ—ಈ ಎಲ್ಲದರ ಶತ್ರು.

---

## ೧೨. ಆರ್. ಎಲ್. ಸ್ಟೀವನ್‌ಸನ್

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಬಂಧ ಬಹುವಾಗಿ ಬೆಳೆಯಿತು. ಅದರ ಉಪಯೋಗ ರಾಜಕೀಯದಲ್ಲೂ ವೈಜ್ಞಾನಿಕ ಶಾಸ್ತ್ರಗಳಲ್ಲಿಯೂ ಹೆಚ್ಚಿತು. ವಿಮರ್ಶೆಯ ಕಾರ್ಯಕ್ಕಂತೂ ಪ್ರಬಂಧಕ್ಕೆ ಸರಿತೂಗುವ ಸಾಹಿತ್ಯ ರೂಪವಿರಲೇ ಇಲ್ಲ. ಪತ್ರಿಕೆಗಳ ಮತ್ತು ಓದುಗರ ಸಂಖ್ಯೆ ಹೆಚ್ಚಿದ ಹಾಗೆಲ್ಲಾ ಸಾಹಿತ್ಯವೇ ಕಸುಬಾಗುಳ್ಳವರೂ ಹೆಚ್ಚಿದರು. ಈ ಕಾಲದಲ್ಲಿ ಪ್ರಬಂಧ ಬರೆಯದ ಸಾಹಿತಿಯೇ ಇಲ್ಲವೆನ್ನಬಹುದು. ಆದರೂ ಲಲಿತ ಪ್ರಬಂಧಗಳನ್ನು ಬರೆದವರ ಪೈಕಿ ಆರ್. ಎಲ್. ಸ್ಟೀವನ್‌ಸನ್ ಹೆಸರುವಾಸಿಯಾದವ. ಇವನು ಸಮುದ್ರ ದೀಪಗಳ ಇಂಜನೀಯರ ಮಗ. ವಕೀಲನಾಗಲು ವಿದ್ಯಾಭ್ಯಾಸ ಮಾಡಿದವನು. ಆದರೆ ಜೀವಕ್ಕೆ ಹತ್ತಿದ ಜಾಡ್ಯದ ಸಲುವಾಗಿ ಆ ಕಸುಬನ್ನೂ ಬಿಟ್ಟು ತನ್ನ ದೇಶವನ್ನೂ ಬಿಟ್ಟು. ಪೆಸಿಫಿಕ್ ಸಾಗರದ ಮಧ್ಯೆ ಇರುವ ಅಸಂಖ್ಯಾತ ದ್ವೀಪಗಳಲ್ಲೊಂದಾದ ಸಾಮೋವಾದಲ್ಲಿ ವಾಸಿಸಿದನು. ಜೀವಾಂತ್ಯದವರೆಗೂ ರೋಗದಿಂದ ನರಳಿದರೂ ಅವನ ಬರವಣಿಗೆಯಲ್ಲಿ ದುಃಖ, ಸಂಕಟ, ನೋವು—ಇವು ಯಾವುದರ ಚಿಹ್ನೆಯೂ ಇಲ್ಲ. ಅವನನ್ನು 'ಹೀಡನಿಸ್ಟ್' ಅಥವಾ ಸೌಖ್ಯವಾದಿ ಎಂದು ಹೇಳುವುದುಂಟು. ಅವನ ಅಭಿಪ್ರಾಯದಲ್ಲಿ ಮನುಷ್ಯನ ಮೊದಲ ಕರ್ತವ್ಯವೆಂದರೆ ಸುಖವಾಗಿರುವುದು. ನೀತಿನಿಯಮಗಳು ಈ ಸುಖಕ್ಕೆ ಅಡ್ಡಿ ಬಂದರೆ ಅವನ್ನು ಗಾಳಿಗೆ ತೂರಿಬಿಡಿ ಎಂದು ಹೇಳುವನು. ಮನುಷ್ಯನಲ್ಲಿ ಒಂದು ಸಹಸ್ರ ದುರ್ಗುಣ

ಗಳಿದ್ದ ಸೃಷ್ಟಿಯಲ್ಲಿ ಅವನೇ ಉತ್ತಮವಸ್ತು ಎಂದು ಸಾರಿರುವನು. ಅವನ ಶೈಲಿ ಕಷ್ಟಪಟ್ಟು ಆರ್ಜಿಸಿದ ಇಂಗ್ಲಿಷ್ ಶೈಲಿ. ಅದನ್ನು ಯಾವ ರೀತಿಯಲ್ಲಿ ಅವನು ಅಭ್ಯಾಸಮಾಡಿದನೆನ್ನುವುದನ್ನು ವಿವರಿಸುವುದಕ್ಕೆ ಒಂದು ಪ್ರಬಂಧ ಬರೆದಿದ್ದಾನೆ. ಹಿಂದಣ ಲೇಖಕರಲ್ಲಿ ಅವನು ಕಂಡ ಸಮಸ್ತ ಗುಣಗಳನ್ನೂ ಸಂಪಾದಿಸಲು ಪ್ರತಿಯೊಬ್ಬರ ಶೈಲಿಯನ್ನೂ ಅನುಕರಣಮಾಡಿ ಕಡೆಗೆ ತನ್ನದೇ ಆದ ಒಂದು ಮಿಶ್ರಶೈಲಿಯನ್ನು ಏರ್ಪಡಿಸಿಕೊಂಡನು. "ಧೂಳು ಮತ್ತು ನೆರಳು" ಎನ್ನುವ ಪ್ರಬಂಧದ ನಡುವಣ ಒಂದು ಭಾಗವನ್ನು ನೋಡಿ

ಈ ಮನುಷ್ಯನೆನ್ನುವ ಪ್ರಾಣಿ ಎಂಥಾ ಭಯಂಕರ ಪಿಶಾಚಿ; ಮುದ್ದೆಕಟ್ಟಿದ ಧೂಳಿನಿಂದ ಹುಟ್ಟಿದ ಜಾಡ್ಯ; ಹೆಜ್ಜೆಗಳನ್ನು ಒಂದಾಗುತ್ತ ಒಂದನ್ನೆತ್ತಿಡುವುದು; ನಿದ್ದೆಯಲ್ಲಿ ಮೈಮರೆತು ಬಿದ್ದಿರುವುದು; ಕೊಲ್ಲುವುದು, ತಿನ್ನುವುದು, ಬೆಳೆಯುವುದು, ತನ್ನಂತಿರುವ ಜೀವಿಗಳನ್ನು ಉತ್ಪತ್ತಿ ಮಾಡುವುದು. ಮೈಮೇಲೆ ಹುಲ್ಲಿನಂತಿರುವ ಕೂದಲು ಬೆಳೆದಿದೆ. ಮುಖದಲ್ಲಿ ನೆಟ್ಟಿರುವ ಎರಡು ಕಣ್ಣುಗಳು ಚಲಿಸುವುವು, ಹೊಳೆಯುವುವು. ಮಕ್ಕಳನ್ನು ಚೀರುವಂತೆ ಮಾಡುವವಸ್ತು—ಆದರೂ ಹತ್ತಿರದಲ್ಲಿ ನಿಂತು ಈಕ್ಷಿಸಿದರೆ, ಅವನ ನೆರೆಹೊರೆಯವರು ನೋಡುವಂತೆ ಅವನನ್ನು ನೋಡಿದರೆ, ಅವನ ಗುಣಗಳು ಎಷ್ಟು ಆಶ್ಚರ್ಯಕರವಾಗಿವೆ! ಪಾಪ ಈ ಬಡಜೀವಿ, ಇಲ್ಲಿ ಅತ್ಯಲ್ಪ ಫಲಕ್ಕಾಗಿ, ಅನೇಕ ಕಷ್ಟಗಳ ಮಧ್ಯೆ ಬಿದ್ದು, ಅನನುರೂಪವಾದ ಅಸಂಬದ್ಧವಾದ ಆಸೆಗಳಿಂದ ಕೂಡಿ, ಅನಾಗರಿಕತೆಯಿಂದ ಆವೃತನಾಗಿ, ಅನಾಗರಿಕತೆಯಿಂದ ಹತ್ತಿಬಂದು ತನ್ನ ಸಹವಾಸಿಗಳನ್ನೇ ತಿನ್ನುವಂಥಾ ಅನಿವಾರ್ಯವಾದ ಶಾಪಕ್ಕೊಳಗಾಗಿರುವನು. ಅವನ ವಿಧಿಗನುಗುಣವಾಗಿ ಕ್ರೂರಜೀವಿಯಾಗಿದ್ದಿದ್ದರೆ ಅವನನ್ನು ದೂರುತ್ತಿದ್ದವರು ಯಾರು ? ಇದಕ್ಕೆ ಬದಲು ಅವನಲ್ಲಿ ನಾವು ಕಾಣುವುದು ಅಪೂರ್ಣವಾದ ಸುಶೀಲಗಳನ್ನು. ಬಹುಮಟ್ಟಿಗೆ ಮಗುವಿನಂತಾಗಿರುವನು. ಅನೇಕ ವೇಳೆ ಮೆಚ್ಚುವಂಥಾ ಧೈರ್ಯವನ್ನು ತೋರಿಸುವನು. ಅನೇಕವೇಳೆ

ಎದೆ ಕರಗಿಸುವಷ್ಟು ಮೃದುವಾಗಿರುವನು. ಈ ಕ್ಷಣಿಕ ಜೀವನದಲ್ಲಿಯೆ ಸರಿತಪ್ಪುಗಳನ್ನೂ, ದೇವರ ಸ್ವಭಾವವನ್ನೂ ಕುರಿತು ಚರ್ಚಿಸಲು ಕೂಡು ವನು. ಒಂದು ಮೊಟ್ಟೆಗೋಸ್ಕರ ಯುದ್ಧ ಮಾಡುವುದಕ್ಕೂ ಒಂದು ತತ್ವಕ್ಕೋಸ್ಕರ ಜೀವ ತ್ಯಾಗಮಾಡುವುದಕ್ಕೂ ಎದ್ದು ನಿಲ್ಲುವನು. ಸ್ನೇಹಿತರನ್ನೂ ಸತಿಯನ್ನೂ ಹೃತ್ಪೂರ್ವಕವಾದ ಸ್ನೇಹದಿಂದ ಆದರಿಸು ವನು. ಬಹಳ ನೋವಿನಿಂದ ಮಗುವನ್ನು ಹೆತ್ತು, ಮಗುವನ್ನು ಬೆಳೆಸಲು ದೀರ್ಘಕಾಲ ಕಳವಳಕ್ಕೊಳಗಾಗುವನು. ಭಾವಿಸುವವರಿಗೆ ಹುಚ್ಚು ಹಿಡಿಯುವಷ್ಟು ವಿಚಿತ್ರವಾದ ಒಂದು ಅಭಿಪ್ರಾಯವೇ ಅವನ ರಹಸ್ಯ: ಅದೇನೆಂದರೆ ಕರ್ತವ್ಯಪರತೆ; ತನಗೂ ನೆರೆಯವನಿಗೂ ದೇವರಿಗೂ ತಾನು ಮಾಡಬೇಕಾದ ಕರ್ತವ್ಯದ ಯೋಚನೆ ಒಂದುಕಡೆ ಸಭ್ಯತೆಯ ಧ್ಯೇಯ—ಸಾಧ್ಯವಾದರೆ ಅದರ ಎತ್ತರಕ್ಕೂ ಏರುವನು; ಇನ್ನೊಂದು ಕಡೆ ಅವಮಾನದ ಒಂದು ಮಿತಿ—ಸಾಧ್ಯವಾದರೆ ಅದರಷ್ಟು ಕೆಳಕ್ಕೆ ಇಳಿಯುವುದಿಲ್ಲ. ಮನುಷ್ಯನಲ್ಲಿ, ಕೊನೆಗೆ ಸ್ವಾರ್ಥಪರನಲ್ಲಿಯೂ, ಸ್ವಾರ್ಥದ ಚಿಂತೆ ಎರಡನೆಯದಾಗಿ ಬರುವುದು. ಆದ್ದರಿಂದಲೇ ಅವನು ಹಸಿವನ್ನು ನಿಗ್ರಹಿಸುವನು, ಭಯಗಳನ್ನು ತುಳಿಯುವನು, ನೋವನ್ನು ಸಹಿಸುವನು. ಬಹಳ ದಡ್ಡನಾದವನೂ ತಾನು ತಪ್ಪುಮಾಡಿದಾಗ ಯಾರೊಬ್ಬರ ಗದರಿಸುವ ದೃಷ್ಟಿತಾಕಿದರೂ ಸಾಕು—ಆ ದೃಷ್ಟಿ ಒಂದು ಮಗುವಿನದಾದರೂ ಸರಿ ಹಿಂಜರಿಯುವನು. ಪರಮಹೇಡಿಗಳನ್ನುಳಿದ ಇತರರೆಲ್ಲರೂ ಯುದ್ಧದ ಅಪಾಯಗಳ ನಡುವೆ ನಿಲ್ಲುವರು. ಘನವಂತರು ಆದರ್ಶಸಾಧನೆಗಾಗಿ ಕೆಲಸಮಾಡಲು ನಿಶ್ಚಯಿಸಿ ಸಾವನ್ನೇ ಧೈರ್ಯದಿಂದ ಎದುರಿಸುವರು; ಸಾವನ್ನೇ ತಬ್ಬಿಕೊಳ್ಳುವರು.

ಇಪ್ಪತ್ತನೆಯ ಶತಮಾನದಲ್ಲಿ ಅನೇಕ ಕಾರಣಗಳಿಂದ ಪ್ರಬಂಧಗಳ ಬರವಣಿಗೆ ಬಹಳ ಹೆಚ್ಚಿತು. ಒತ್ತಾಯದ ವಿದ್ಯಾಭ್ಯಾಸದಿಂದ ಓದುಗರ ಸಂಖ್ಯೆಯೂ, ಅದರ ಜೊತೆಯಲ್ಲಿ, ಅವರಿಗೆ ಓದುವ ಸಾಮಗ್ರಿ ಒದಗಿಸುವುದಕ್ಕೆ ಬಗೆ ಬಗೆಯ ವೃತ್ತಪತ್ರಿಕೆಗಳೂ ಮತ್ತು ಅಗ್ಗವಾದ ಪ್ರಕಟಣೆಗಳೂ ಹೆಚ್ಚಿದುವು. ರೈಲುಗಳೇ ಮುಂತಾದ ಪ್ರಯಾಣ ಸೌಕರ್ಯಗಳೂ

ನವನಾಗರಿಕತೆಯ ಕೈಗಾರಿಕೆಗಳೂ ಹೆಚ್ಚಿದುದರಿಂದ ಆತುರವೇ ಜೀವನದ ಹೆಗ್ಗುರುತು ಆಗಿಬಿಟ್ಟಿದೆ. ಸಾವಧಾನವಾಗಿ ಕೂತು ಓದಲು ಅನೇಕರಿಗೆ ಹೊತ್ತೇ ಇಲ್ಲ. ಸಂಜೆ ಮನೆಗೆ ಬಂದಾಗ, ದಿನಚರಿ ದುಡಿತದ ದಣುವನ್ನೂ ಬೇಸರವನ್ನೂ ಕಳೆದುಕೊಳ್ಳುವುದಕ್ಕೆ, ಊಟವಾದ ಮೇಲೆ ನಿದ್ದೆ ಬರುವ ಮುಂಚೆ, ಹತ್ತು ಹದಿನೈದು ನಿಮಿಷಗಳಲ್ಲಿ ಓದಬಹುದಾದ ಲೇಖನ ಅವರಿಗೆ ಬೇಕು; ಅಂತಹ ಸಾಹಿತ್ಯ ಪ್ರಬಂಧ ಇಲ್ಲವೆ ಸಣ್ಣ ಕಥೆ. ಆದುದರಿಂದ ಈ ಎರಡು ಸಾಹಿತ್ಯರೂಪಗಳು ಈಗ ಪ್ರಬಲಕ್ಕೆ ಬಂದು ಸಾವಿರಗಟ್ಟಲೆಯಲ್ಲಿ ಉತ್ಪನ್ನವಾಗುತ್ತಿವೆ. ಜಿ. ಕೆ. ಚೆಸ್ಟರ್‌ಟನ್, ರಾಬರ್ಟ್‌ಲಿಂಡ್ ಮುಂತಾದ ಹಲವು ಉತ್ತಮ ಪ್ರಬಂಧಕಾರರನ್ನು "ದಿ ಇಲಸ್ಟ್ರೇಟಿಡ್ ಲಂಡನ್ ನ್ಯೂಸ್" "ದಿ ನ್ಯೂ ಸ್ಟೇಟ್ಸ್‌ಮನ್ ಮತ್ತು ನೇಷನ್" ಮುಂತಾದ ಉತ್ತಮ ದರ್ಜೆಯ ಪತ್ರಿಕೆಗಳು ವಾರಕ್ಕೊಂದು ಪ್ರಬಂಧ ಬರೆಯುವಂತೆ ಗೊತ್ತುಮಾಡಿಕೊಳ್ಳುತ್ತಿವೆ. ಹಲವು ಸಂವತ್ಸರಗಳಿಂದ ರಾಬರ್ಟ್‌ಲಿಂಡ್ ಪ್ರತಿ ವಾರವೂ "ದಿ ನ್ಯೂ ಸ್ಟೇಟ್ಸ್‌ಮನ್ ಮತ್ತು ನೇಷನ್" ಪತ್ರಿಕೆಗಳಲ್ಲಿ ಒಂದು ಪ್ರಬಂಧ ಬರೆಯುತ್ತಿರುವನು—ಹೆಸರುವಾಸಿಯಾದ ಇಂದಿನ ಪ್ರಬಂಧಕಾರರಲ್ಲಿ ಮ್ಯಾಕ್ಸ್ ಬೀರ್‌ಬ್ಹಾಮ್, ಹಿಲ್ಲೇರ್ ಬೆಲಕ್, ಎ. ಜಿ. ಗಾರ್ಡನರ್, ಇ. ವಿ. ಲ್ಯೂಕಾಸ್ ಮುಖ್ಯವಾದವರು. ಇವರೆಲ್ಲ ಅನೇಕ ಬಗೆಯ ಪ್ರಬಂಧಗಳನ್ನು ಬರೆದಿರುವರು. ಅವುಗಳಲ್ಲಿ ಕೆಲವು ಸಾಹಿತ್ಯವನ್ನೂ ಲಲಿತಕಲೆಗಳನ್ನೂ ವಿಮರ್ಶೆಮಾಡುವುವು; ಇನ್ನು ಕೆಲವು ಜನರ ನಡೆನುಡಿಗಳನ್ನು ವಿಮರ್ಶಿಸುವುವು; ಮತ್ತೆ ಕೆಲವು ಮನೋರಂಜಕವಾದ ರೀತಿಯಲ್ಲಿ ಸ್ವವಿಷಯವನ್ನು ಹೇಳುವುವು.

## ೧೩. ಜಿ. ಕೆ. ಚೆಸ್ಟರ್‌ಟನ್

ಚೆಸ್ಟರ್‌ಟನ್ ಬಹಳ ದೊಡ್ಡ ವಿದ್ವಾಂಸ. ಪುಸ್ತಕ ವ್ಯಾಪಾರಿಯ ಬಳಿ ಆಳಾಗಿದ್ದು, ಸಮಯ ದೊರೆತಾಗ ಪುಸ್ತಕಗಳನ್ನೋದಿ ಪಾಂಡಿತ್ಯವನ್ನು ಸಂಪಾದಿಸಿದನು. ಒಂದೇ ಪದವನ್ನು ಎರಡರ್ಥದಲ್ಲಿ ಒಂದೇ ವಾಕ್ಯದಲ್ಲಿ ಉಪಯೋಗಿಸುವ ಕೌಶಲ್ಯ ಅವನಲ್ಲಿ ವಿಶೇಷ ಉಂಟು. ಅವನಿಗೆ "ಮಾಸ್ಟರ್ ಆಫ್ ಪ್ಯಾರಡಾಕ್ಸ್" ಅಂದರೆ ವಿರೋಧಾಭಾಸದ ಗುರು ಎಂಬ ಪ್ರಶಸ್ತಿ ಬಂದಿದೆ. ವಾಕ್ಯವನ್ನೋದಿದ ಮೊದಲಲ್ಲಿ ಅದರ ಒಂದು ಭಾಗಕ್ಕೂ ಇನ್ನೊಂದು ಭಾಗಕ್ಕೂ ಪರಸ್ಪರ ವಿರುದ್ಧ ಭಾವವಿದ್ದಂತೆ ಕಂಡರೂ ಕ್ರಮೇಣ ಒಂದು ದೊಡ್ಡ ತತ್ವ ಅಡಗಿರುವುದೆಂದು ಭಾಸವಾಗುವುದು. ಅವನ ಮುಖ್ಯ ಗುಣ ವಿವೇಕ; ಇಂಗ್ಲಿಷರು 'ಕಾಮನ್‌ಸೆನ್ಸ್' ಎಂದು ಕರೆಯುವ ಮನೋಧರ್ಮ ಅವನಲ್ಲಿ ಹೇರಳವಾಗಿದೆ. ಹೆಸರಿಗೆ ಅದು ಸಾಮಾನ್ಯ ಗುಣವಾದರೂ ಜನರಲ್ಲಿ ನಿಜವಾಗಿಯೂ ಅದು ಅಪೂರ್ವವೆಂದೇ ಹೇಳಬೇಕು. ಅವನ ಪ್ರಬಂಧಗಳ ಪುಸ್ತಕವೊಂದರ ಹೆಸರು—"ಅತ್ಯಲ್ಪವಾದ ಅದ್ಭುತಗಳು." ಅವನ ಪ್ರಬಂಧಮಾಲೆಗಳ ಹೆಸರನ್ನು ನೋಡಿದರೆ ಸಾಕು ಅವನ ವಿಲಕ್ಷಣ ದೃಷ್ಟಿ ಸ್ಪಷ್ಟವಾಗುವುದು: "ಹಾಡಲಾರದ ಪುಟ್ಟ ಹಕ್ಕಿಗಳು"; "ಚರಿತ್ರೆಗಿಂತ ಹಿಂದಿನ ಅನಾಗರಿಕ ಕಾಲದ ರೈಲ್ವೆಸ್ಟೇಷನ್"; "ಕೋಪಗೊಂಡ ರಸ್ತೆ"; "ದೆವ್ವಗಳ ಅಂಗಡಿ" "ಸೀಮೆಸುಣ್ಣದ ಚೂರು"; "ಒಂದೇ ಕಾಲಿರುವುದರ ಅನುಕೂಲಗಳು"; "ಹಾಸಿಗೆಯಲ್ಲಿ ಮಲಗಿರುವುದು"; "ಭೂತದ

ಅಜ್ಜಿ"; "ವೈದಿಕನಾದ ಹಜಾಮ". ಹೆಂಗಸಿನ ವಿಚಾರವಾಗಿ ಬರೆದಿರುವ ಈ ಪ್ರಬಂಧದ ಕೆಲವು ಭಾಗಗಳನ್ನು ನೋಡಿ.

ಬಾತ್ಮೀದಾರನೊಬ್ಬ ಸಮುದಾಯದ ಅಡುಗೆ ಮನೆಗಳನ್ನು ಖಂಡಿಸಿ ನಾನು ಹೇಳಿದ ಕೆಲವು ಮಾತನ್ನು ವಿಚಾರಿಸಿ ಒಂದು ಸ್ವಾರಸ್ಯವಾದ ಮತ್ತು ನೈಪುಣ್ಯವುಳ್ಳ ಕಾಗದವನ್ನು ನನಗೆ ಬರೆದಿರುವನು; ಕೇವಲ ಕಾಗುಣಿತ ಬಲ್ಲ ಸಮೂಹವಾದಿಯ ಮನೋದೃಷ್ಟಿಯಿಂದ ಅವನು ಸಮುದಾಯದ ಅಡುಗೆ ಮನೆಗಳನ್ನು ಅಚ್ಚುಕಟ್ಟಾಗಿ ಸಮರ್ಥಿಸಿರುವನು. ಆದರೆ ಇವೆಲ್ಲವನ್ನೂ ಪರೀಕ್ಷೆಮಾಡುವ ರೀತಿ ಇನ್ನೊಂದು ಇದೆ. ಅದಕ್ಕೂ ಲೆಕ್ಕಾಚಾರಕ್ಕೂ ಏನೂ ಸಂಬಂಧವಿಲ್ಲ. ಇದನ್ನು ಇವನ ಪಂಗಡಕ್ಕೆ ಸೇರಿದ ಅನೇಕರಂತೆ ಇವನೂ ಗ್ರಹಿಸಲಾರ. ಒಂದೇ ಊಟದ ಮೇಜನ್ನು ಏಕಕಾಲದಲ್ಲಿ ಉಪಯೋಗಿಸಿಕೊಂಡು ಹತ್ತು ಮಂದಿ ಒಟ್ಟಿಗೆ ಊಟ ಮಾಡಿದರೆ ಖರ್ಚಿನಲ್ಲಿ ಉಳಿತಾಯವಾಗುತ್ತೆಂದು ಮಾತ್ರ ಅವನಿಗೆ ಗೊತ್ತು. ಅದೇನೋ ಸರಿ. ಹಾಗೆಯೇ ಬೇರೆ ಬೇರೆ ಹೊತ್ತಿನಲ್ಲಿ ನಿದ್ದೆ ಮಾಡುವ ಏರ್ಪಾಡು ಮಾಡಿಕೊಂಡು ಒಂದೇ ಷರಾಯನ್ನು ಒಬ್ಬರಾದ ಮೇಲೊಬ್ಬರು ಹತ್ತು ಜನ ಉಪಯೋಗಿಸಿದರೆ ಅದರಿಂದ ಖರ್ಚು ಇನ್ನೂ ಉಳಿತಾಯವಾಗುತ್ತದೆ. ಆದರೆ ಇಲ್ಲಿ ವಿಚಾರಮಾಡಬೇಕಾದ ಪ್ರಶ್ನೆ ಪದಾರ್ಥವನ್ನು ಎಷ್ಟು ಅಗ್ಗವಾಗಿ ಕೊಳ್ಳುತ್ತೇವೆ ಎನ್ನುವುದಲ್ಲ; ಏನನ್ನು ಕೊಳ್ಳುತ್ತೇವೆ ಎನ್ನುವುದು! ಗುಲಾಮನನ್ನಿಟ್ಟುಕೊಳ್ಳುವುದು ಬಹಳ ಅಗ್ಗ; ಗುಲಾಮನಾಗಿಬಿಡುವುದು ಇನ್ನೂ ಅಗ್ಗ.

ಹೋಟೆಲಿನಲ್ಲಿ ಊಟಮಾಡುವ ಅಭ್ಯಾಸ ಹೆಚ್ಚುತ್ತಿದೆಯೆಂದು ನಮ್ಮ ಬಾತ್ಮೀದಾರ ವಾದಿಸುತ್ತಾನೆ. ಹಾಗೆಯೇ ಆತ್ಮಹತ್ಯೆ ಮಾಡಿಕೊಳ್ಳುವ ಅಭ್ಯಾಸವೂ ಹೆಚ್ಚುತ್ತಿದೆಯೆಂದು ನನ್ನ ನಂಬಿಕೆ. ಇವೆರಡಕ್ಕೂ ಸಂಬಂಧ ಕಲ್ಪಿಸುವ ಇಷ್ಟ ನನಗಿಲ್ಲ. ಆತ್ಮಹತ್ಯೆಮಾಡಿಕೊಂಡ ಮೇಲೆ ಅವನು ಹೋಟೆಲಿನಲ್ಲಿ ಊಟಮಾಡಲಾಗಲಿಲ್ಲವೆನ್ನುವುದೇನೋ ಸ್ಪಷ್ಟವಾಗಿದೆ; ಆದರೆ ಅವನು ಹೋಟೆಲಿನಲ್ಲಿ ಊಟಮಾಡಿದ್ದರಿಂದ ಆತ್ಮಹತ್ಯೆಮಾಡಿಕೊಂಡನೆಂದು ಸೂಚಿಸುವುದು ಒಂದು ವಿಪರೀತ. ಆದರೆ ಇವೆರಡನ್ನೂ ಅಕ್ಕಪಕ್ಕದಲ್ಲಿಟ್ಟು ನೋಡಿದರೆ ರೂಢಿಯಲ್ಲಿರುವ ಕ್ರಮಗಳ ವಿಚಾರವಾಗಿ ಮಾಡುವ ವಾದಗಳು ಸತ್ಯವಿಲ್ಲದವು, ಹೀನವಾದುವು ಎಂಬುದು ಸ್ಪಷ್ಟಪಡುವುದು.

" ಈ ತರಹದ ಏರ್ಪಾಟಿನಿಂದ ಅಡುಗೆ ಕೆಲಸದ ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲ ಕಾಟಗಳೂ ನಮ್ಮ ಹೆಂಗಸರಿಗೆ ತಪ್ಪಿ ಉತ್ತಮ ಸಂಸ್ಕೃತಿಯನ್ನು ಪಡೆಯಲು ಬೇಕಾದ ಸ್ವಾತಂತ್ರ್ಯ ಅವರಿಗೆ ಸಿಕ್ಕುವುದಿಲ್ಲವೇ ?" ಹೀಗೆ ನನ್ನ ಬಾತ್ಮೀದಾರ ಕೇಳುತ್ತಾನೆ.

ಇನ್ನು ಉತ್ತಮ ಸಂಸ್ಕೃತಿಯ ವಿಚಾರ. ನಾನು ಆ ಸಂಸ್ಕೃತಿಯನ್ನು ಚೆನ್ನಾಗಿ ಬಲ್ಲೆ; ಆದ್ದರಿಂದ ನನ್ನ ಕೈಲಾದಮಟ್ಟಿಗೂ ನಾನು ಯಾರಿಗೂ ಅಂಥಾ ಸ್ವಾತಂತ್ರ್ಯ ಕೊಡುವುದಿಲ್ಲ. ಸ್ವತಂತ್ರರಾಗಿರುವ ಶ್ರೀಮಂತರ ಮೇಲೆ ಆಗಿರುವ ದುಷ್ಪರಿಣಾಮವೇ ಸಾಕು. ಲಕ್ಷಾಧಿಕಾರಿಯ ಇತರ ಎಲ್ಲ ವಿಷಯಲಂಪಟಕ್ಕಿಂತಲೂ ಅದು ಕೆಟ್ಟದ್ದು— ಜೂಜಿಗಿಂತ ಕೆಟ್ಟದ್ದು ; 'ಲೋಕಸೇವೆ' ಗಿಂತಲೂ ಕೆಟ್ಟದ್ದು. ಕೆಲವರು ಇಂಗ್ಲೆಂಡಿನ ಉತ್ತಮ ಕವಿಗಿಂತ ಬೆಲ್ಜಿಯಮ್ಮಿನ ಅನಾಮಧೇಯ ಕವಿ ದೊಡ್ಡವನು ಎನ್ನುವುದು, ಸಾರ್ವಜನಿಕ ಸಹಾನುಭೂತಿಯನ್ನು ಕಳೆದುಕೊಳ್ಳುವುದು, ಕೂಲಿಗಾರನೊಬ್ಬನ ಸಂಭಾಷಣೆಯನ್ನಾರಂಭಿಸಿದರೆ ಅವನ ಸಂಗಡ ಮಾತನಾಡುವ ಸಾಮರ್ಥ್ಯ ಕಳೆದುಕೊಳ್ಳುವುದು ಇದೆಲ್ಲವೂ ಅದರ ಪ್ರಭಾವವೇ.

'ರೈಲಿನ ಗುಟ್ಟು' ಎನ್ನುವ ಪ್ರಬಂಧದ ಮೊದಲವಾಕ್ಯ ಹೀಗಿದೆ.

ಈ ಕಥೆ ಸತ್ಯವೆಂದು ನಾನು ಹೇಳುವುದಿಲ್ಲ. ಏಕೆಂದರೆ, ಕೂಡಲೆ ನಮಗೆ ಕಾಣುವಂತೆ ಅವೆಲ್ಲ ಸತ್ಯವೆ, ಕಥೆಯಲ್ಲ.

---

## ೧೪. ಎ. ಜಿ. ಗಾರ್ಡನರ್

ಎ ಜಿ. ಗಾರ್ಡನರಿನ ಶೈಲಿ ಸಂಭಾಷಣೆಯ ಸರಸಶೈಲಿ: ಸ್ಪಷ್ಟವಾಗಿದೆ, ಮನೋರಂಜಕವಾಗಿದೆ, ತಿಳಿಯಾದ ಹಾಸ್ಯ ದಿಂದ ಕೂಡಿದೆ. ಅವನ ಪ್ರಬಂಧಗಳು ಮನುಷ್ಯನನ್ನು ಕುರಿತು ವಿಚಾರಮಾಡುವಂತೆ ನಮ್ಮನ್ನು ಪ್ರೇರೇಪಿಸುವುವು. ಕೆಲವು ಪ್ರಬಂಧಗಳ ಹೆಸರನ್ನು ಇಲ್ಲಿ ಕೊಡಬಹುದು: "ಕುರುಡರ ಸಂತೋಷ ಸ್ವಭಾವ"; "ಬೆಳಗಿನ ಜಾವ ಏಳುವುದು" "ನಾವು ಪುಸ್ತಕಗಳನ್ನು ಕೊಳ್ಳುತ್ತೇವೆಯೆ?" "ರಣಜಿತಸಿಂಗರ ಕ್ರಿಕೆಟ್ ಆಟ." ಗಾರ್ಡನರ ಶೈಲಿಯಂತೆಯೇ ಹಿಲೇರ್ ಬೆಲಕ್ಕಿನ ಶೈಲಿಯೂ ಸರಳವಾದುದು, ನೇರವಾದುದು, ಸ್ಪಷ್ಟ ವಾದುದು. ಇವನು ಸಣ್ಣ ಸಣ್ಣ ಪದಗಳನ್ನೇ ಉಪಯೋಗಿಸು ವುದು ಹೆಚ್ಚು. ಇವನ ಪ್ರಬಂಧಗಳಲ್ಲಿ, ನಾಟಕದಲ್ಲಿ ಕಂಡು ಬರುವ ಸನ್ನಿವೇಶ ನಿರ್ಮಾಣಶಕ್ತಿಯೂ ಮನಸ್ಸನ್ನು ಆಕರ್ಷಿ ಸುವ ರೀತಿಯೂ ಇವೆ. ಎಷ್ಟು ಅಲ್ಪವಿಚಾರವನ್ನು ಕುರಿತಾ ದರೂ ರಸವತ್ತಾಗಿ ಬರೆಯಬಲ್ಲ. ಸ್ವವಿಷಯ ಅಲ್ಲಲ್ಲಿ ಬಂದೇ ಬರುವುದು.

---

## ೧೫. ರಾಬರ್ಟ್ ಲಿಂಡ್

ಈಗಿನ ಪ್ರಬಂಧಕಾರರಲ್ಲಿ ರಾಬರ್ಟ್ ಲಿಂಡ್ ಬಹಳ ಸ್ವಾರಸ್ಯವಾದ ರೀತಿಯಲ್ಲಿ ಬರೆಯುವ ಕವಿ. ಅವನ ಶೈಲಿ ಸುಲಭ; ತಿಳಿಹಾಸ್ಯದಿಂದೊಡಗೂಡಿದೆ. ಅವನು ಕಣ್ಣನ್ನು

ಬಿಟ್ಟುಕೊಂಡು ಪ್ರಪಂಚದಲ್ಲಿ ತಿರುಗಾಡುವ ವ್ಯಕ್ತಿ; ಅವನ ಮನಸ್ಸು ಪಾದರಸದಂತೆ ಓಡಾಡುವಂಥಾದ್ದು. ಎಲ್ಲ ಬಗೆಯ ಅನುಭವ ಸಂಪತ್ತೂ ಅವನಲ್ಲಿ ಹೇರಳವಾಗಿವೆ. ವರ್ಣನೆ, ಕಥೆ ಹೇಳುವುದು, ಸಾಹಿತ್ಯ ವಿಮರ್ಶೆ—ಎಲ್ಲದರಲ್ಲಿಯೂ ನೈಜವಾದ ವಾಸ್ತವಿಕವಾದ ಚಿತ್ರವನ್ನು ರಚಿಸುತ್ತಾನೆ. ಯಾವ ಬರವಣಿಗೆಯಾದರೂ ಪ್ರತ್ಯಕ್ಷ ಜೀವನದ ಒಂದು ಭಾಗದಂತೆ ಸ್ಪಷ್ಟವಾಗಿ ಕಾಣುವುದು. ಪ್ರಬಂಧದ ಮೈಕಟ್ಟು ರಚನೆ ಚೆನ್ನಾಗಿವೆ. ವಾಕ್ಯಸಮೂಹಗಳು ಆದರ್ಶರೀತಿಯಲ್ಲಿ ಹೆಣೆದಿವೆ. ಪ್ರಬಂಧ ಬರೆಯುವುದನ್ನು ಕಲಿಯುವವರಿಗೆ ಇವನು ಅತ್ಯುತ್ತಮ ಮಾರ್ಗದರ್ಶಕ. ಪ್ರಬಂಧಗಳ ಪುಸ್ತಕವೊಂದರ ಹೆಸರು: "ಅಜ್ಞಾನದ ಸಂತೋಷಗಳು"; ಇದು ಅದರಲ್ಲಿನ ಒಂದು ಪ್ರಬಂಧದ ಹೆಸರೂ ಆಗಿದೆ. ಇತರ ಕೆಲವು ಪ್ರಬಂಧಗಳ ಹೆಸರುಗಳು ಹೀಗಿವೆ: "ಒಳ್ಳೆಯ ಸಂಕಲ್ಪಗಳು"; "ಬೆಕ್ಕುಗಳು"; "ಬೆಕ್ಕಿನ ಮರಿಗಳು"; "ಕುದುರೆ ಜೂಜಿನಲ್ಲಿ ತೋರುವ ಬುದ್ಧಿಶಕ್ತಿ"; "ಮೊಟ್ಟೆಗಳು"; "ದೆವ್ವದಷ್ಟು ಧೈರ್ಯವಿದ್ದ ಹಜಾಮ"; "ತಮಾಷೆಯನ್ನೂ ಹಾಸ್ಯವನ್ನೂ ತಿಳಿಯುವ ಬಗೆ"; "ಹುರುಳಿಕಾಯಿಯ ನೀತಿಗಳು."

## ಅಜ್ಞಾನದ ಸಂತೋಷಗಳು

ಪುರನಿವಾಸಿಯೊಡನೆ ಹಳ್ಳಿಗಾಡುಗಳಲ್ಲಿ ತಿರುಗಾಡಲು ಹೊರಟಾಗ ಅವನ ಅಜ್ಞಾನದ ರಾಶಿಯನ್ನು ಕಂಡು ಅಚ್ಚರಿಪಡದೇ ಇರುವುದು ಸಾಧ್ಯವಿಲ್ಲ—ಅದರಲ್ಲಿಯೂ ಏಪ್ರಿಲ್ ಮೇ ತಿಂಗಳುಗಳಲ್ಲಿ. ಹಳ್ಳಿಗಾಡುಗಳಲ್ಲಿ ನಾನೇ ಒಂಟಿಯಾಗಿ ತಿರುಗಾಡಲು ಹೊರಟರೆ ನನ್ನ ಅಜ್ಞಾನದ ರಾಶಿಯನ್ನು ಕಂಡು ನಾನೇ ಅಚ್ಚರಿಪಡದಿರುವುದೂ ಅಸಾಧ್ಯ. ಬೀಚ್

ಮರಕ್ಕೂ, ಎಲ್ಮ್‌ಮರಕ್ಕೂ ಇರುವ ವ್ಯತ್ಯಾಸ. ಥ್ರಷ್ ಪಕ್ಷಿಯ ಹಾಡಿಗೂ ಬ್ಲಾಕ್‌ಬರ್ಡ್ ಪಕ್ಷಿಯ ಹಾಡಿಗೂ ಇರುವ ವ್ಯತ್ಯಾಸ ತಿಳಿಯದೆ ಕಾಲ ಹಾಕಿ ಸತ್ತುಹೋಗುವವರು ಸಹಸ್ರಾರು ಮಂದಿ. ಈಗಿನ ದೊಡ್ಡ ನಗರಗಳಲ್ಲಿ ಈ ಅಂಶಗಳನ್ನು ತಿಳಿದಿರುವ ಮನುಷ್ಯ ಸಿಕ್ಕಿದರೆ ಅವ ನೊಂದು ಅಪೂರ್ವವಸ್ತುವೆಂದು ಭಾವಿಸಬೇಕು. ನಾವು ಪಕ್ಷಿಗಳನ್ನು ನೋಡಿಲ್ಲವೆಂದಲ್ಲ; ಅವುಗಳನ್ನು ನಾವು ಗಮನಿಸಿ ನೋಡುವುದಿಲ್ಲ ಅಷ್ಟೇ. ನಮ್ಮ ಜೀವನವೆಲ್ಲ ಪಕ್ಷಿಗಳಿಂದ ಆವೃತವಾಗಿದೆ. ಆದರೂ ನಮ್ಮ ದೃಷ್ಟಿ ಅವುಗಳ ಕಡೆ ಹೋಗುವುದಿಲ್ಲ. ಪದಾರ್ಥಗಳನ್ನು ಲಕ್ಷಿಸುವ ಶಕ್ತಿ ನಮ್ಮಲ್ಲಿ ಬಹಳ ಹೀನವಾಗಿರುವುದರಿಂದ, ಚಾಂಫಿಂಚ್ ಹಕ್ಕಿ ಹಾಡು ವುದೆ ಇಲ್ಲವೇ; ಕೋಗಿಲೆಯ ಬಣ್ಣವೇನು? ಮುಂತಾದ ಪ್ರಶ್ನೆಗಳಿಗೆ ಉತ್ತರ ಹೇಳಲಾರೆವು. ಕೋಗಿಲೆ ಹಾರಾಡುವಾಗ ಮಾತ್ರ ಹಾಡುವುದೆ? ಮರದ ರೆಂಬೆಗಳಲ್ಲಿ ಕುಳಿತಾಗ ಹಾಡುವುದೆ? ಕವಿ ಈ ವಾಕ್ಯವನ್ನು ಬರೆಯುವಾಗ ಪ್ರಕೃತಿಯನ್ನು ಗಮನಿಸಿದ್ದನೆ:

"ಓಕುವೃಕ್ಷದ ಹಸರು ತೋಳಲಿ ಕುಳಿತು ಕೋಗಿಲೆ ಹಾಡಲು
ಮನುಜನಿಗೆ ಮಧುಮಾಸದೊಸಗೆಯು ಮೊದಲ ಸಂತಸ ಸೂಸಲು"

ಇತ್ಯಾದಿ ಪ್ರಶ್ನೆಗಳು ಬಂದಾಗ ನಾವು ಚಿಕ್ಕ ಹುಡುಗರಂತೆ ತಪ್ಪು ತಪ್ಪಾಗಿ ವಾದಿಸುತ್ತೇವೆ.

ಈ ಅಜ್ಞಾನ ಸಂಪೂರ್ಣವಾಗಿ ವ್ಯಸನಕಾರಕವಲ್ಲ; ಹೊಸಹೊಸ ದನ್ನು ಕಂಡು ನಿರಂತರವಾದ ಸಂತೋಷ ಹುಟ್ಟುವುದು ಅದರಿಂದಲೇ. ನಾವು ಸಾಕಾದಷ್ಟು ಅಜ್ಞಾನಿಗಳಾಗಿದ್ದರೆ ಪ್ರತಿ ವಸಂತದಲ್ಲಿಯೂ ಪ್ರಕೃ ತಿಯ ಪ್ರತಿಯೊಂದು ಅಂಶವೂ ನವೀನತೆಯೊಡನೆ ನಮಗೆ ಅನುಭವ ವಾಗುವುದು. ಕೋಗಿಲೆಯನ್ನು ನಮ್ಮ ಜೀವಮಾನದ ಅರ್ಧಕಾಲದಲ್ಲಿ ಒಂದು ಸಲವೂ ನೋಡದೆ ಹೋಗಿದ್ದರೆ, ಅದನ್ನು ಅಲೆಯುವ ವಾಣಿ ಯೆಂದೇ ತಿಳಿದಿದ್ದರೆ ಅದನ್ನು ನೋಡಿದಾಗ ನಮಗೆ ಅತ್ಯಧಿಕ ಸಂತೋಷ ವಾಗುವುದಿಲ್ಲವೆ? ಚರಿಸುವ ವೇಳೆಯಲ್ಲಿ ಅದು ತನ್ನ ಪಾಪಗಳ ಅರಿವಿ ನಿಂದ ಇರಿಯಲ್ಪಟ್ಟು ವನದಿಂದ ವನಕ್ಕೆ ಹಾರಿಹೋಗುತ್ತಿರಬಹುದು,

ಬೆಟ್ಟದ ತಪ್ಪಲಿನ ತೋಪಿನೊಳಕ್ಕೆ ನುಗ್ಗುವ ಮುಂಚೆ ಅಲ್ಲಿ ಸೇಡುತೀರಿಸಿ ಕೊಳ್ಳುವ ಹಗೆಗಳ ಗುಂಪಿರಬಹುದೆಂದು ಹೆದರಿ, ಬಾಲ ಆದಿರುತ್ತಿರಲು ಆಕಾಶದಲ್ಲಿ ಸ್ವಲ ಕಾಲ ತೇಲಬಹುದು. ಪ್ರಕೃತಿಶಾಸ್ತ್ರ ಓದುವವನು ಪಕ್ಷಿಜೀವನವನ್ನು ಎಚ್ಚರಿಕೆಯಿಂದ ನೋಡುವುದರಲ್ಲಿ ಸಂತೋಷ ಪಡುವುದಿಲ್ಲವೆಂದು ನಾನು ಹೇಳುವುದಿಲ್ಲ. ಆದರೆ ಅವನದು ಏಕಪ್ರಕಾರ ವಾದ ಸಂತೋಷ; ಶಾಂತವಾಗಿ, ನಿಧಾನವಾಗಿ ಹುಟ್ಟುವ ಸಂತೋಷ. ಅದಕ್ಕೂ ಮೊದಲ ಸಲ ಕೋಗಿಲೆಯನ್ನು ನೋಡುವವನ ಅರುಣೋದಯದಂತಿರುವ ಉತ್ಸಾಹಕ್ಕೂ ಹೋಲಿಕೆಯೇ ಇಲ್ಲ. ಇವನಿಗೆ ಪ್ರಪಂಚವೇ ಹೊಸತಾಗಿರುವುದು.

ಇಂಗ್ಲಿಷ್ ಕಾದಂಬರೀಕಾರನೊಬ್ಬನನ್ನು ವಿದೇಶೀಯನೊಬ್ಬನು ಇಂಗ್ಲೆಂಡಿನ ಮುಖ್ಯಬೆಳೆ ಯಾವುದೆಂದು ಕೇಳಿದನಂತೆ. ಅವನು ಒಂದು ಕ್ಷಣವೂ ಹಿಂದುಮುಂದು ನೋಡದೆ 'ರೈ' ಎಂದು ಹೇಳಿದನು. ಇಷ್ಟು ಪೂರ್ಣವಾದ ಅಜ್ಞಾನದಲ್ಲಿ ಮಹತ್ವದ ಅಂಶ ಸ್ವಲ್ಪವಿರಬೇಕೆಂದು ನನಗೆ ತೋರುವುದು. ಅನಕ್ಷರಸ್ಥರ ಅಜ್ಞಾನ ಅಗಾಧವಾಗಿದೆ. ಟೆಲಿಫೋನನ್ನು ಉಪಯೋಗಿಸುವ ಸಾಮಾನ್ಯ ಮನುಷ್ಯ ಅದು ಕೆಲಸ ಮಾಡುವ ರೀತಿಯನ್ನು ವಿವರಿಸಲು ಅಸಮರ್ಥ. ನಮ್ಮ ಪೂರ್ವಿಕರು ಪುರಾಣಗಳಲ್ಲಿ ಹೇಳಿರುವ ಪವಾಡಗಳನ್ನು ಹೇಗೆ ನಂಬಿದರೋ ಹಾಗೆಯೇ ಈಗಿನವರು ಟೆಲಿಫೋನ್, ರೈಲ್ವೆ, ಲಿನೋಟೈಪ್, ಏರೋಪ್ಲೇನ್‌ಗಳನ್ನು ನಂಬಿರುವರು. ಅವುಗಳ ವಿಚಾರ ಪ್ರಶ್ನೆಮಾಡುವುದೂ ಇಲ್ಲ, ಅವುಗಳ ರಚನೆಯನ್ನು ಸರಿಯಾಗಿ ತಿಳಿದುಕೊಳುವುದೂ ಇಲ್ಲ. ಪ್ರತಿಯೊಬ್ಬನೂ ಪ್ರಯೋಗಪರೀಕ್ಷೆ ಮಾಡಿ, ಸಂಶೋಧಿಸಿ ಕೆಲವು ಸತ್ಯಗಳನ್ನು ಮಾತ್ರ ತನ್ನದಾಗಿ ಮಾಡಿಕೊಳ್ಳುವನೆಂದು ತೋರುವುದು. ದಿನಚರಿಯ ಕೆಲಸಕ್ಕೆ ಹೊರಗಾದ ಜ್ಞಾನವನ್ನು ಅನೇಕರು ಆಟದವಸ್ತುವೆಂದು ತಿಳಿಯುವರು. ಆದರೂ ಯಾವುದಾದರೂ ಒಂದು ವಸ್ತುವನ್ನು ಕುರಿತು ಯೋಚನೆ ಮಾಡುವುದೇ ನಮಗೆ ಆನಂದ—ಸತ್ತಮೇಲಿರುವ ಜೀವದ ವಿಚಾರ, ಅಥವಾ ಅರಿಸ್ಟಾಟಲಿನಂಥ ದೊಡ್ಡ ಪಂಡಿತನನ್ನೇ ಮರಳುಗೊಳಿಸಿದ ಈ ಬಗೆಯ ಪ್ರಶ್ನೆ: ಮಧ್ಯಾಹ್ನ ಹನ್ನೆರಡು ಗಂಟೆಯಿಂದ ನಡುರಾತ್ರಿಯ ವರೆಗೂ ಶೀನುವುದು ಏಕೆ ಒಳ್ಳೆಯದು? ನಡುರಾತ್ರಿಯಿಂದ ನಡುಹಗಲ ವರೆಗೂ ಶೀನುವುದು ಏಕೆ ಕೆಟ್ಟದು? ಮನುಷ್ಯನಿಗೆ ತಿಳಿದಿರುವ ಮಹ

ತ್ವದ ಸಂತೋಷಗಳಲ್ಲಿ ಒಂದು—ಜ್ಞಾನಾರ್ಜನೆಗಾಗಿ ಅಜ್ಞಾನಪ್ರಪಂಚದಲ್ಲಿ ಹಾರಾಡುವುದು, ವಿಚಾರಮಾಡುವುದು; ಅಜ್ಞಾನದಿಂದ ಉಂಟಾಗುವ ದೊಡ್ಡಸಂತೋಷವೆಂದರೆ ಪ್ರಶ್ನೆಗಳನ್ನು ಕೇಳುವುದರಲ್ಲಿರುವ ಸಂತೋಷ. ಈ ಸಂತೋಷವನ್ನು ಕಳೆದುಕೊಂಡವನು, ಅಥವಾ ಇದು ಹೀಗೆ ಎಂದು ಉತ್ತರಹೇಳುವ ಸಂತೋಷವನ್ನು ಹೊಂದಿರುವವನು, ಆಗಲೆ ಅಸ್ವಾಭಾವಿಕನಾಗಲು ಆರಂಭಿಸಿರುವನೆಂದು ಹೇಳಬಹುದು. ಜೊವೆಟ್ಟನಂಥ ಪರಿಶೋಧಕನನ್ನು ಕಂಡು ಅಸೂಯೆಪಡುವುದು ನ್ಯಾಯ. ಅರವತ್ತು ವಯಸ್ಸಾದ ಮೇಲೆ ಅವನು ಶಾರೀರಕಶಾಸ್ತ್ರ ವ್ಯಾಸಂಗಮಾಡಲು ಕುಳಿತನಂತೆ. ನಮ್ಮಲ್ಲನೇಕರು ಆ ವಯಸ್ಸಿಗೆ ಮುಂಚೆಯೆ ನಾವು ಅಜ್ಞಾನಿಗಳೆಂಬ ಅರಿವನ್ನು ಕಳೆದುಕೊಂಡಿರುತ್ತೇವೆ. ಅಳಿಲಿನ ಉಗ್ರಾಣದಂತೆ ಅಲ್ಪವಾಗಿರುವ ನಮ್ಮ ಜ್ಞಾನದ ವಿಚಾರವಾಗಿ ಹೆಮ್ಮೆಪಡುವುದೇನು! ಹೆಚ್ಚುತ್ತಿರುವ ವಯಸ್ಸನ್ನೇ ಸರ್ವಜ್ಞತ್ವದ ಮೆಟ್ಟಲುಗಳಂತೆ ಭಾವಿಸುವುದೇನು! ಸಾಕ್ರೆಟೀಸನು ವಿವೇಕಿಯೆಂದು ಖ್ಯಾತಿಹೊಂದಿದ್ದು ಅವನು ಸರ್ವಜ್ಞನಾದುದರಿಂದಲ್ಲ. ಅವನ ಎಪ್ಪತ್ತನೆಯ ವಯಸ್ಸಿನಲ್ಲಿ ಅವನಿಗೆ ಏನೇನೂ ತಿಳಿದಿಲ್ಲವೆಂದು ಕಂಡುಕೊಂಡಿದ್ದರಿಂದ.

---

## ೧೬. ಇ. ವಿ. ಲ್ಯೂಕಾಸ್

ಈಗಿನ ಕಾಲದ ಕೆಲವು ಪ್ರಬಂಧಗಳನ್ನೋದಿದರೆ ಅವು ಸಣ್ಣ ಕತೆಯಂತೆ ಕಾಣುವುವು. ಪ್ರಬಂಧಕ್ಕೂ ಸಣ್ಣ ಕತೆಗೂ ವ್ಯತ್ಯಾಸವೇ ಇಲ್ಲದಂತೆ ಭಾಸವಾಗುವುದು. ಈ ಮುಂದೆ ಕೊಡುವ ಪ್ರಬಂಧ ಭಾಗ ಇ. ವಿ. ಲ್ಯೂಕಾಸನ್‌ನ ಬರವಣಿಗೆ. ಈ ಪ್ರಬಂಧದ ಒಂದೊಂದು ಮಾತೂ ನಾಯಿಯ ಹೇಳಿಕೆ.

ಅಸೂಯೆಗೊಳಪಟ್ಟ ಎರಡು ನಾಯಿಗಳ ನಾಶಕ್ಕೆ ಕಾರಣ ವಾದ ಈ ನಾಯಿ ಅನುತಾಪಕ್ಕೊಳಗಾಗಿ, ತನ್ನ ತಪ್ಪನ್ನೊಪ್ಪಿ ಕೊಂಡು ಆತ್ಮಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದು. ಇದನ್ನು ಓದಿದಮೇಲೆ ನಮಗೆ ಭಾಸವಾಗುವುದು ಒಂದೇ ವಿಚಾರ: ಈ ನಾಯಿ ಎಷ್ಟು ಒಳ್ಳೆಯ ಸ್ವಭಾವವುಳ್ಳದ್ದು. ನಮ್ಮ ಮಾನವಜನಾಂಗದಲ್ಲಿ ಇಂಥ ಒಳ್ಳೆಯತನವಿರುವ ಜನ ಬಹಳ ವಿರಳವೇ ಅಲ್ಲವೆ? ಮನುಷ್ಯನು ನಾಯಿಗಿಂತ ಕೀಳಾ ಗುವುದು ಸಾಧ್ಯ ಎಂದು ತೋರಿಸಿ ಅವನನ್ನು ನಾಚಿಕೆಗೊಳ ಪಡಿಸಿ ಒಳ್ಳೆಯತನಕ್ಕೆ ಅವನನ್ನೆಳೆಯಬೇಕೆನ್ನುವುದೇ ಪ್ರಬಂಧ ಬರೆದಿರುವವನ ಆಸೆ. ಆದುದರಿಂದಲೇ ಅವನು ನಾಯಿಯೇ ಮಾತನಾಡುವಂತೆ ಬರೆದಿರುವನು :

"ಇದು ನನ್ನ ಮನಸ್ಸನ್ನು ಕೊರೆಯುತ್ತಿರಲು ನನಗೆ ಹೊರೆಗೆ ಹೋಗಲು ಇಚ್ಛೆ ಇಲ್ಲ."

"ಕಥೆಯನ್ನು ಸಂಪೂರ್ಣವಾಗಿ ಹೇಳಿ ಶಾಂತಿಯಿಂದ ಸಾಯ ಬೇಕೆಂದು ನನ್ನ ಆಸೆ."

"ಮೊದಲಿನಿಂದ ಆರಂಭಿಸುತ್ತೇನೆ."

ನಾನು ಏಕಮಾತ್ರಪುತ್ರನಂತೆ ಬೆಳೆಯುತ್ತಿದ್ದ ನಾಯಿ. ನಾನಿದ್ದ ಮನೆ ಬಹಳ ಸೌಖ್ಯದಿಂದ ಕೂಡಿದ್ದಿತು. ನನ್ನ ಯಜಮಾನಿ ಸುಂದರಿ ಯಾದ ಹೆಂಗಸು. ಅವಳು ನೆಲದಮೇಲೆ ಎಳೆಯುವಷ್ಟು ಉದ್ದವಾದ ಲಂಗವನ್ನು ತೊಡುತ್ತಿದ್ದಳು. ಅದರ ಮೇಲೆ ಮಲಗುವುದು ನನ್ನ ವಾಡಿಕೆ. ನನ್ನ ಯಜಮಾನ ಒಬ್ಬ ದೊಡ್ಡ ಘನವಾದ ಮನುಷ್ಯ. ಗಾಳಿ ಸಂಚಾರಹೋಗುವುದು ಅವನಿಗೆ ಇಷ್ಟ. ದಂಪತಿಗಳಿಬ್ಬರೂ ದುರ್ಬಲರು. ಊಟಮಾಡುವಾಗ ನನಗೆ ಒಂದೊಂದು ಚೂರು ತಿಂದಿಕೊಡುತ್ತಿದ್ದರು ;

ನಾನು ಬೆಂಕಿಯ ಸಮೀಪದಲ್ಲಿ ಮಲಗುತ್ತಿದ್ದೆ. ಇದೆಲ್ಲ ಮಹಡಿಯ ಮೇಲೆ; ನನಗೆ ಅಲ್ಲಿರುವುದೇ ಇಷ್ಟ. ವೇಳೆಗೆ ಸರಿಯಾಗಿ ನನಗೆ ಆಹಾರ ಕೊಡುತ್ತಿದ್ದ ಆಳಿನ ಹೆಸರು ವಿನ್‌ಸೆಂಟ್. ನಾಯಿ ಅವನದೇ ಎಂದು ಜನ ತಿಳಿದುಕೊಳ್ಳುವ ಹಾಗೆ ಮಾಡಲು ಅವನು ·ಯತ್ನಿಸುತಿದ್ದುದು ನನಗೆ ತಿಳಿದಿದ್ದರೂ ಸಣ್ಣ ಪುಟ್ಟ ಕೆಲಸಗಳಿಗೆ ಅವನು ಹೊರಟಾಗ ನಾನು ಅವನ ಸಂಗಡ ಹೋಗುತ್ತಿದ್ದೆ.

ನನ್ನ ಸುಖವೆಷ್ಟಿತ್ತು ನೀವೇ ನೋಡಿ, ಏಕಮಾತ್ರ ನಾಯಿಗಿರು ವಷ್ಟು ಸುಖ.

ಅದೇ ನನ್ನ ದುಃಖದ ಮೂಲ."

[ಕಥೆ ಹೇಳುವ ನಾಯಿ ನೀರುಸ್ಪ್ಯಾನಿಯಲ್ ಜಾತಿ ಯದು. ಯಜಮಾನ ಮನೆಗೆ ಅಬರ್ಡೀನ್ ಟೆರಿಯರ್ ಜಾತಿಯ ಇನ್ನೊಂದು ನಾಯಿಯನ್ನು ಕೊಂಡು ತಂದ. ಅಂದಿ ನಿಂದ ಸುಖ, ಒಲವು, ಆಹಾರ ಎಲ್ಲದರಲ್ಲಿಯೂ ಅರ್ಧಪಾಲು ಮಾತ್ರ ಸಲ್ಲುತ್ತಿದ್ದರಿಂದ ಕಥೆಗಾರ ನಾಯಿಗೆ ಅಸೂಯೆ, ಅಸುಖ, ಅತೃಪ್ತಿಗಳುಂಟಾದುವು.]

" ಕೆಲವು ತಿಂಗಳು ಹೀಗೆ ಕಳೆಯಿತು. ಒಂದು ದಿನ ಪೀಟರಿಗೆ (ಅದು ಹೊಸ ನಾಯಿಯ ಹೆಸರು) ಕಾಯಿಲೆ ಮೊದಲಾಯಿತು. ದಿನ ದಿನಕ್ಕೆ ಕಾಯಿಲೆ ಹೆಚ್ಚಿ ಕಡೆಗೆ ಅದು ಸತ್ತುಹೋಯಿತು. ದುಃಖ ವನ್ನು ತೋರಿಸುವುದು ನ್ಯಾಯವಾಗಿದ್ದಿತು. ಆದರೆ ನನ್ನ ಹೃದಯ ದಲ್ಲಿ ಎಷ್ಟು ಆನಂದ! ನನ್ನ ಬಾಲ ಅಲ್ಲಾಡುತ್ತಿದ್ದಿತು—ಅಲ್ಲಾಡದಂತೆ ತಡೆದು ಹಿಡಿಯುವುದು ನನಗೆ ಬಹಳ ಕಷ್ಟವಾಯಿತು. ನನ್ನ ಯಜ ಮಾನಿ ಹೇಳಿದಳು: " ಸರಿ, ಪ್ರಿಯ, ಇನ್ನು ಮುಂದೆ ನಮಗೆ ರಷ್ (ನನ್ನ ಹೆಸರು ರಷ್) ಒಂದೇಸಾಕು." ನನ್ನ ಸಂತೋಷವನ್ನು ತೋರಿಸದಿರಲು ಸೊಣ ಅಡ್ಡಿಯಾಯಿತೆಂದು ನಾನು ನಟನೆ ಮಾಡಬೇಕಾಯಿತು.

ಆ ಕ್ಷಣದಿಂದ ನನ್ನ ಹಳೆಯ ಸುಖವೆಲ್ಲ ಹಿಂದುರುಗಿತು.

ಅದರೇನು! ಮನುಷ್ಯರ ಮನಸ್ಸು ಬಹಳ ಚಂಚಲ.

[ಇನ್ನೊಂದು ದಿನ ಯಜಮಾನ ಒಂದು ಕಾಕರ್ ಸ್ಪಾನಿಯಲ್ ತಂದ; ಪುನಃ ವ್ಯಾಕುಲ, ಅಸೂಯೆ, ದ್ವೇಷ ಮೂಡಿದುವು.]

ಒಂದು ದಿನ ನನ್ನ ದುಃಖವನ್ನು ಕುರಿತು ಯೋಚನೆಮಾಡುತ್ತಿರುವಾಗ ಒಂದು ಪ್ರಕಾಶಮಾನವಾದ ಭಾವನೆಯು ನನಗೆ ಹೊಳೆಯಿತು— ಆಗ ನನ್ನ ಮನಸ್ಸಿಗೆ ಅದು ಪ್ರಕಾಶಮಾನವಾಗಿ ಕಂಡಿತು.

ಈಗ ನನಗೇ ತಿಳಿದಿದೆ ಅದು ಕೆಟ್ಟದೆಂದು. ನಿಮಗೆ ಗೊತ್ತಿರಬಹುದು ಸ್ಪಾನಿಯಲ್ಲಿನ ಸ್ವಭಾವ. ಅದು ಎಲ್ಲರಲ್ಲಿಯೂ ಸ್ನೇಹ ತೋರಿಸಿದರೂ ಅಚಲವಾದ ಸ್ವಾಮಿಭಕ್ತಿ ತೋರಿಸುವುದು ಒಬ್ಬನಿಗೆ ಮಾತ್ರವೆ. ಅದೂ ಗಂಡಸಿಗೆ. ಗೃಹಕೃತ್ಯದ ವಿಚಾರವೆಲ್ಲ ತಿಳಿಯುವಷ್ಟು ವಯಸ್ಸೂ, ಅನುಭವವೂ ಅದಕ್ಕೆ ಇರಲಿಲ್ಲ. ಸ್ವಾಭಾವಿಕವಾಗಿ ಅದಕ್ಕೆ ಜನರ ಮೇಲ್ಮೆ ಅಂತಸ್ತುಗಳ ವಿಚಾರ ತಿಳಿಯದು. ಅದರ ಅಜ್ಞಾನ ಮತ್ತು ಮೃದುಸ್ವಭಾವಗಳನ್ನು ನನ್ನ ಮೇಲ್ಮೆಗಾಗಿ ಉಪಯೋಗಿಸಿಕೊಳ್ಳುವ ಏರ್ಪಾಡು ಮಾಡಿದೆ. ಮನೆಯ ಆಳು ವಿನ್‌ಸೆಂಟನ್ನೇ ಯಜಮಾನನೆಂದು ತಿಳಿದು ಅದರ ಒಲವೆಲ್ಲಾ ಅವನಲ್ಲಿ ನೆಲಸುವಂತೆ ಮಾಡಿದೆ.

ನನ್ನ ಯಜಮಾನನ ಸ್ವಭಾವ ನನಗೆ ಚೆನ್ನಾಗಿ ಗೊತ್ತು. ಆ ನಾಯಿಗೆ ವಿನ್‌ಸೆಂಟನಲ್ಲಿ ಹೆಚ್ಚು ಪ್ರೀತಿಯೆಂದು ಕಂಡಕೂಡಲೆ ಅದನ್ನು ಪ್ರೀತಿಸುವುದನ್ನು ಬಿಟ್ಟು ಹೊರಗಟ್ಟುವನು—ಯಾವನೋ ಒಬ್ಬ ಸ್ನೇಹಿತನಿಗೆ ಕೊಟ್ಟುಬಿಡುವನು ; ಅಥವಾ ಆಳನ್ನೂ ನಾಯಿಯ ಸಂಗಡ ಮನೆಯಿಂದ ಹೊರಕ್ಕೆ ಓಡಿಸುವನು—ಎಂದು ನಾನು ಯೋಚಿಸಿದೆ.

ನಡೆದದ್ದೂ ಹಾಗೆಯೇ.

ಆ ಹೊತ್ತಿನಿಂದ ನನಗೆ ಸುಖವಿಲ್ಲ. ಯಜಮಾನ ಯಜಮಾನಿಯರಿಂದ ಮುದ್ದಿನ ವಸ್ತುವನ್ನು ಕಳವು ಮಾಡಿದ್ದೆ. ಅಸೂಯೆ ಸ್ವಾರ್ಥಗಳ ಮೂಲಕ ಹೃದಯವಿರುವೆಡೆಯಲ್ಲಿ ಒಂದು ಕಲ್ಲನ್ನಿಟ್ಟೆ. ವಿನ್‌ಸೆಂಟಿನ ಎದೆ ಒಡೆದುಹೋಯಿತು. ಇದರಲ್ಲಿ ನನ್ನ ಕೈವಾಡವಿರುವುದು ಅವನಿಗೆ ತಿಳಿದಂತೆ ತೋರಿತು. ನನ್ನನ್ನು ಅವನು ಮೊದಲಿನಂತೆ ಎಂದಿಗೂ ಕಾಣಲಿಲ್ಲ. ಹೌದು. ನಾನು ಮಾಡಿದ್ದು ನೀಚಕೃತ್ಯ. ಅದಕ್ಕಾಗಿ ವಿಷಾದಪಡುತ್ತೇನೆ. ಉತ್ತಮ ಸ್ಪ್ಯಾನಿಯಲ್ಲು, ಸದ್ಗೃಹಸ್ಥ ಮಾಡಬಾರದ ಕೆಲಸವನ್ನು ಮಾಡಿದೆ. ನೀವು ನನ್ನನ್ನು ಬಲವಾಗಿ ಒದ್ದರೆ ಆಗ ಸುಖದಿಂದ ಸಾಯುತ್ತೇನೆ.

ಈಗ ನಮ್ಮಲ್ಲಿ ಒತ್ತಾಯದ ವಿದ್ಯಾಭ್ಯಾಸದ ಫಲವಾಗಿ ಓದುವ ಜನರ ಸಂಖ್ಯೆ ಹೆಚ್ಚುತ್ತಿದೆ. ಅವರಿಗೆ ಓದಲು ಮನೋರಂಜಕವಾದ, ಹಾಗೂ ತಿಳಿವನ್ನು ಕೊಡುವ ಸಾಹಿತ್ಯಸಂಪತ್ತು ಬೇಕಾಗಿದೆ. ಇದನ್ನೊದಗಿಸುವುದು ವಿದ್ಯಾವಂತರ ಕರ್ತವ್ಯ. ಓದುವುದಕ್ಕೆ ಒಳ್ಳೆಯ ಸಾಹಿತ್ಯವನ್ನು ಕೊಡದಿದ್ದರೆ ಹಸಿದ ಮಕ್ಕಳಿಗೆ ಒಳ್ಳೆಯ ಅನ್ನವನ್ನು ನೀಡದೆ ಹೋಗುವಂತೆ ಅದು ಒಂದು ದೊಡ್ಡ ದೋಷ. ಒಳ್ಳೆಯ ಪ್ರಬಂಧಗಳ ಮೂಲಕ ಜನರ ನೀತಿಯನ್ನೂ ನಡೆನುಡಿಗಳನ್ನೂ ತಿದ್ದಬಹುದು; ನಯನಾಜೋಕನ್ನು ಅವರಿಗೆ ತೋರಿಸಬಹುದು; ಅವರ ಅಭಿರುಚಿಯನ್ನು ಉತ್ತಮಗೊಳಿಸಬಹುದು. ಸಾಹಿತ್ಯದ ಮೂಲಕ ಜನಸೇವೆ ದೇಶಸೇವೆ ಮಾಡುವವರಿಗೆ ಪ್ರಬಂಧಕ್ಕಿಂತ ಉತ್ತಮವಾದ ದಾರಿಯಿಲ್ಲ. ಈಗ ಹತ್ತು ಹದಿನೈದು ವರ್ಷಗಳಿಂದ ಕನ್ನಡದಲ್ಲಿ ಅನೇಕ ಬಗೆಯ ಪ್ರಬಂಧಗಳು ಬಂದಿವೆ. ಅವು ಇನ್ನೂ ಹೆಚ್ಚು ವೈವಿಧ್ಯವನ್ನು ತಾಳಿ ಸರ್ವತೋಮುಖವಾಗಿ ಬೆಳೆಯಬೇಕು. ಇಂಗ್ಲಿಷಿನ ಉತ್ತಮ ಪ್ರಬಂಧಗಳನ್ನು ನೋಡಿ ಆ ಮಾದರಿಯನ್ನು ಕನ್ನಡ ಸಾಹಿತ್ಯದಲ್ಲಿ ಇರುವಂತೆ ಮಾಡು

ವುದು ಅಥವಾ ಅವುಗಳಿಂದ ಸ್ಫೂರ್ತಿಯನ್ನು ಹೊಂದಿ ಉತ್ತಮ ದರ್ಜೆಯ ಹೊಸ ಪ್ರಬಂಧವನ್ನು ಬರೆಯುವುದು--ಇವು ಈಗ ಅಗತ್ಯವಾಗಿ ನಡೆಯಬೇಕು. ಪ್ರಬಂಧಗಳು ನಮ್ಮಲ್ಲಿ ಹೇರಳವಾಗಿ ಬೆಳೆಯಲಿ, ಅದರ ಸುಗ್ಗಿಯ ಸಂಪತ್ತು ಮನೆಮನೆಯಲ್ಲಿಯೂ ತುಂಬಲಿ ಎನ್ನುವುದೇ ನನ್ನ ಹೆಬ್ಬಯಕೆ.

---

## ಮೈಸೂರು ವಿಶ್ವವಿದ್ಯಾನಿಲಯ

# ಪ್ರಚಾರಪುಸ್ತಕಮಾಲೆ

೧. ಖಗೋಳಶಾಸ್ತ್ರ ಪ್ರವೇಶ—
ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.

೨. ಸಮಾಜದ ರೋಗರುಜಿನಗಳು—
ಜಿ. ಹನುಮಂತರಾವ್, ಎಂ.ಎ.

೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.

೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.

೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.

೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.

೮. ಕನ್ನಡಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.

೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್,
ಎಂ.ಎಸ್‌ಸಿ.

೧೦. ಪಂಪ—ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.

೧೨. ಕನಸುಗಳು—ಡಾ॥ ಎನ್. ಎಸ್. ನಾರಾಯಣಶಾಸ್ತ್ರೀ, ಎಂ.ಎ.

೧೩. ಮದುವೆ—ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.

೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್,
ಎಂ.ಎಸ್‌ಸಿ., ಎಲ್‌ಎಲ್.ಬಿ.

೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.

೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.

೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—
ಪಿ. ಜಿ. ಸತ್ಯಗಿರಿನಾಥನ್, ಎಂ.ಎ.

೨೦. ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ,
ಬಿ.ಎ., ಎಂ.ಬಿ.ಬಿ.ಎಸ್.

೨೧. ಸಾರ್ವಜನಿಕ ವೆಚ್ಚ—ಡಾ॥ ಎಂ. ಎಚ್. ಗೋಪಾಲ್,
ಎಂ.ಎ. ಪಿಎಚ್.ಡಿ.

೨೨. ಶಿಶುವಿಹಾರಗಳು—ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರೀ, ಎಂ.ಎ.
೨೪. ವಿಡಂಬನ—ಎಸ್. ವಿ. ರಂಗಣ್ಣ, ಎಂ.ಎ.
೨೫. ಎಲ್ಲೋರ ಮತ್ತು ಅಜಂತ—ಡಾ|| ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.
೨೬ ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೨೭. ಭಾಸ—ಎಚ್. ಎಲ್. ಹರಿಯಪ್ಪ, ಎಂ.ಎ.
೨೮. ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ, ಎಂ.ಎ.
೨೯. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.
೩೦. ರಕ್ತ—ಡಿ. ಶಾಮಣ್ಣ, ಬಿ.ಎ., ಎಂ.ಬಿ.ಬಿ.ಎಸ್.
೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್, ಎಂ.ಎ.
೩೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರ ಭಟ್ಟ, ಎಂ.ಎ.
೩೩. ಗಣಿತಶಾಸ್ತ್ರದ ಸ್ವರೂಪ—ಡಾ|| ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೩೪. ಋಗ್ವೇದ—ಎಂ. ಕೃಷ್ಣಸ್ವಾಮಿ, ಎಂ.ಎ.
೩೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ, ಎಂ.ಎ.
೩೬. ಆಳ್ವಾರುಗಳು—ಎಂ. ಯಾಮುನಾಚಾರ್ಯ, ಎಂ.ಎ.
೩೭. ಹಿಂದುಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು—ವಿ. ರಾಘವೇಂದ್ರರಾವ್, ಎಂ.ಎ., ಬಿ.ಟಿ.
೩೮. ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.
೩೯. ಮಕ್ಕಳ ಭಾವಜೀವನ—ಡಾ|| ಬಿ. ಕುಪ್ಪುಸ್ವಾಮಿನಾಯಿಡು, ಎಂ.ಎ.
೪೦. ಸಹಕಾರ—ಎಸ್. ಗೋಪಾಲಸ್ವಾಮಿ, ಎಂ.ಎ.
೪೧. ನಯಸೇನ—ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
೪೨. ಕೌಟಿಲ್ಯ—ಡಾ|| ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.
೪೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ, ಎಂ.ಎ.
೪೪. ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್, ಎಂ.ಎ.
೪೫. ಲಕ್ಷ್ಮೀಶ—ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ.
೪೬. ರುಚಿ—ಎಸ್. ವಿ. ರಂಗಣ್ಣ, ಎಂ.ಎ.

೪೭. ಕೀಟಗಳು—ಡಿ. ಎಸ್. ವೀರಯ್ಯ, ಎಂ.ಎಸ್‌ಸಿ.
೪೮. ಅಲೆಗಳು—ಕೆ. ಶೇಷಾದ್ರಿಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೪೯. ಮುದ್ದಣ—ಟಿ. ಎಸ್. ಶಾಮರಾವ್, ಎಂ.ಎ.
೫೦. ಐವರು ಪ್ರಸಿದ್ಧರಾದ ಭೌತ ವೈಜ್ಞಾನಿಕರು—
ಬಿ ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೫೧ ಕೃತಕರೇಷ್ಮೆ—ಎಂ. ಷಡಕ್ಷರಸ್ವಾಮಿ, ಎಂ.ಎಸ್‌ಸಿ.
೫೨ ಚೀನರ ಇತಿಹಾಸ ಮತ್ತು ನಾಗರಿಕತೆ—ಎಸ್. ದೇಶಿಕಾಚಾರ್, ಎಂ.ಎ.
೫೩ ಯುದ್ಧಕಾಲದ ಆರ್ಥಿಕ ಸಮಸ್ಯೆಗಳು-ಎಸ್. ಲಕ್ಷ್ಮೀನರಸಿಂಹನ್, ಎಂ.ಎ.
೫೪. ಆಹಾರ—ಜೆ. ಆರ್. ಲಕ್ಷ್ಮಣರಾವ್, ಎಂ.ಎಸ್‌ಸಿ.
೫೫. ಇಬ್ಸನ್ನಿನ ಕೆಲವು ನಾಟಕಗಳು-ಎಸ್. ಮಂಜನಾಥ್, ಎಂ.ಎ.
೫೬. ಶಬ್ದಪ್ರಪಂಚ-ಆರ್. ಎಲ್. ನರಸಿಂಹಯ್ಯ, ಎಂ.ಎಸ್‌ಸಿ
೫೭. ಪ್ರಜಾಭಿಪ್ರಾಯ—ಟಿ. ಎಸ್. ರಾಜಗೋಪಾಲ ಅಯ್ಯಂಗಾರ್,
ಎಂ.ಎ.,ಎಲ್‌ಎಲ್.ಬಿ
೫೮. ಕಲ್ಲಿದ್ದಲು—ಕೆ. ಎಸ್. ಲಕ್ಷ್ಮಣರಾವ್, ಎಂ.ಎಸ್‌ಸಿ.
೫೯. ಜನಪದಮುಕ್ತಕಗಳು-ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.
೬೦. ಹಾಲು—ಕೆ. ಎಸ್. ಲಕ್ಷ್ಮಣರಾವ್, ಎಂ.ಎಸ್‌ಸಿ.
೬೧. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.
೬೨. ಭಾರತದಲ್ಲಿ ಪ್ರಜಾಪ್ರಭುತ್ವ—ಟಿ. ಎಸ್. ರಾಜಗೋಪಾಲ
ಅಯ್ಯಂಗಾರ್, ಎಂ.ಎ., ಎಲ್‌ಎಲ್.ಬಿ.
೬೩. ಆರೋಗ್ಯಸಾಧನೆ-ವೋಟಗಾನಹಳ್ಳಿ ಮಹದೇವಶಾಸ್ತ್ರಿ,ಎಲ್.ಎ.ಎಂ.ಎಸ್.
೬೪-೬೫. ಆಧುನಿಕ ಭಾರತದಲ್ಲಿ ನೃತ್ಯಕಲೆ-ಯು.ಎಸ್. ಕೃಷ್ಣರಾವ್ ಎಂ.ಎಸ್‌ಸಿ.
ಮತ್ತು ಚಂದ್ರಭಾಗಾದೇವಿ; ಬೆಲೆ, ಸಾದಾ ೫೦ ನ.ಪೈ. ಉತ್ತಮ ೭೫ ನ. ಪೈ.
೬೬. ಚುನಾವಣೆಗಳು—ಗ. ಸ. ಹಾಲಪ್ಪ, ಎಂ.ಎ. (ಕೊಲಂಬಿಯ)
೬೭. ಮೀನಿನಿಂದ ಮಾನವನೆಡೆಗೆ—ಹೆಚ್. ಬಿ. ದೇವರಾಜ ಸರ್ಕಾರ್,
ಬಿ.ಎಸ್‌ಸಿ. (ಆನರ್ಸ್)
೬೮. ಕ್ಷಯ—ಡಾ|| ಎಸ್.ಟಿ. ಪುಟ್ಟಣ್ಣ, ಬಿ.ಎಸ್‌ಸಿ., ಎಂ.ಬಿ.,
ಬಿ.ಎಸ್., ಡಿ.ಒ.ಎಂ.ಎಸ್. (ಲಂಡನ್)
೬೯. ಶಿಲ್ಪಿಯ ಪಾತ್ರ—ಶ್ರೀ ಬಿ.ಎಲ್. ಸಿ. ರಾಜನ್, ಬಿ.ಇ.
೭೦. ಪರತಂತ್ರಜೀವಿಗಳು ಮತ್ತು ಪರತಂತ್ರಜೀವನ—ಹೆಚ್. ಬಿ.
ದೇವರಾಜ ಸರ್ಕಾರ್, ಬಿ.ಎಸ್‌ಸಿ. (ಆನರ್ಸ್)
೭೧. ಮಾನವ ಹಕ್ಕುಗಳು-ಹೆಚ್.ಎಂ. ಸದಾಶಿವಯ್ಯ, ಎಂ.ಎ., ಎಲ್‌ಎಲ್.ಬಿ.
೭೨. ವಿನೋದಗಣಿತ—ವಿ.ಕೆ. ದೊರೆಸ್ವಾಮಿ,ಎಂ.ಎಸ್‌ಸಿ.,ಬಿ.ಎಲ್.

# ಪುರಾವಳಿಕೆಗಣಿ

೭೩. ಸಾಬೂನು—ಕೆ.ಎಸ್. ಲಕ್ಷ್ಮಣರಾವ್, ಎಂ.ಎಸ್‌ಸಿ.
೭೪. ಉಷ್ಣಯಂತ್ರಗಳ ಪರಿಚಯ—ಕೆ. ವಿ. ಸುಬ್ಬರಾಯ, ಬಿ.ಎಸ್‌ಸಿ.,ಬಿ.ಇ
೭೫. ಬಟ್ಟೆಗಳ ವೈಜ್ಞಾನಿಕ ಪರೀಕ್ಷೆ-ಶ್ರೀನಾಗಭೂಷಣ,ಬಿ.ಎಸ್‌ಸಿ.,ಎಫ್.ಟಿ.ಐ
೭೬. ಮಹಾಭಾರತ—ಡಾ|| ಕೆ. ಕೃಷ್ಣಮೂರ್ತಿ, ಎಂ.ಎ.,ಪಿಎಚ್.ಡಿ.
೭೭. ಜೇನು—ಡಿ.ಎಸ್. ಮುರಿಗಪ್ಪ ಶ್ರೇಷ್ಠಿ, ಬಿ.ಎಸ್‌ಸಿ. (ಅಗ್ರಿ.)
೭೮. ಮಾನವಶಾಸ್ತ್ರ—ಡಾ|| ಕೆ.ಎನ್. ವೆಂಕಟರಾಯಪ್ಪ, ಎಂ.ಎ.,ಪಿಎಚ್.ಡಿ.
೭೯. ಅಥರ್ವವೇದ—ಸಿ.ಜಿ. ಪುರುಷೋತ್ತಮ, ಎಂ.ಎ
೮೦. ನೇಮಿಚಂದ್ರ—ಎನ್. ಅನಂತರಂಗಾಚಾರ್, ಎಂ.ಎ.,ಬಿ.ಟಿ.
೮೧-೮೨. ಹಾಸ್ಯ—ಎಸ್.ವಿ. ರಂಗಣ್ಣ, ಎಂ.ಎ.
೮೩. ಶ್ರೀನಾಥ—ಕೆ. ವೆಂಕಟರಾಮಪ್ಪ, ಎಂ.ಎ.
೮೪. ಷಡಕ್ಷರದೇವ—ದೇ. ಜವರೇಗೌಡ, ಎಂ.ಎ.
೮೫. ಚಿತ್ರಾಂಗದಾ—ಯು. ಕೆ. ಸುಬ್ಬರಾಯಾಚಾರ್, ಎಂ.ಎ.
೮೬. ಸಂಚಿಯ ಹೊನ್ನಮ್ಮ—ಎಚ್.ಎಂ. ಶಂಕರನಾರಾಯಣರಾವ್, ಎಂ.ಎ.
೮೭. ವಾಲ್ಮೀಕಿ ರಾಮಾಯಣ—ಯು.ಕೆ. ಸುಬ್ಬರಾಯಾಚಾರ್, ಎಂ.ಎ.
೮೮. ಜಪಾನರ ಇತಿಹಾಸ ಮತ್ತು ನಾಗರಿಕತೆ—ಕೆ. ಪದ್ಮಾವತಮ್ಮ, ಎಂ.ಎ.,ಬಿ.ಇಡಿ.
೮೯. ಕ್ರಿಶ್ಚಿಯನ್ ಕ್ಯಾಲೆಂಡರ್—ಬಿ. ಸೀತಾರಾಮಶಾಸ್ತ್ರಿ, ಎಂ.ಎ.
೯೦. ಆಲ್‌ಫ್ರೆಡ್ ನೊಬೆಲ್-ಎಸ್. ಸುಬ್ರಹ್ಮಣ್ಯಂ, ಬಿ.ಎಸ್‌ಸಿ.,ಬಿ. ಎಡ್.
೯೧. ಗೃಹರಚನಾವಿಧಿ—ಕೆ.ಎಸ್. ಸದಾನಂದ, ಬಿ.ಇ.
೯೨. ಹಿಂದೂಧರ್ಮಸಾರ— ಸ್ವಾಮಿ ಸೋಮನಾಥಾನಂದ.
೯೩. ಪ್ರಜಾಪ್ರಭುತ್ವದಲ್ಲಿ ರಾಜಕೀಯಪಕ್ಷಗಳು—ಟಿ. ಎಸ್. ರಾಜಗೋಪಾಲ್ ಅಯ್ಯಂಗಾರ್, ಎಂ.ಎ.,ಎಲ್‌ಎಲ್.ಬಿ.
೯೪. ದಾರಿತಪ್ಪಿದ ಮಕ್ಕಳು—ಎನ್.ಎಸ್. ಶಾಂತಮ್ಮ, ಎಂ.ಎ.
೯೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ, ಎಂ.ಎ.
೯೬. ಪ್ರೇರಣೆ—ಕೆ. ನಾಗರಾಜಶಾಸ್ತ್ರಿ, ಎಂ.ಎ.
೯೭. ಪ್ರಾಣಿಗಳ ರಚನಾ ಕೌಶಲ—ಹೆಚ್.ಬಿ. ದೇವರಾಜ ಸರ್ಕಾರ್, ಬಿ.ಎಸ್‌ಸಿ. (ಆನರ್ಸ್.)
೯೮. ಭಾರತೀಯ ರಾಷ್ಟ್ರೀಯತೆಯ ವಿಕಾಸ—ಎ.ಎಸ್. ನಂಜುಂಡಸ್ವಾಮಿ, ಬಿ.ಎ., ಬಿ.ಟಿ.
೯೯. ಶ್ರೀ ಹರ್ಷ—ಸಿ. ಅನಂತಾಚಾರ್
೧೦೦. ಪ್ರಸಾರಾಂಗ—ಡಾ|| ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.